ಶ್ರೀ

# ವೇಂಕಟೇಶ ಸುಪ್ರಭಾತ

(ಕನ್ನಡ ವ್ಯಾಖ್ಯಾನ ಸಹಿತ)




ಪ್ರಕಾಶನ:

ತಿರುಮಲೆ ತಿರುಪತಿ ದೇವಸ್ಥಾನಗಳು

ತಿರುಪತಿ

# SRI VENKATESA SUPRABHATHA
*(In Kannada)*



T.T.D. Religious Publications Series : No. 139

Eight Edition: 1995
Re-Print : 2004,**2017**

Copies : 5,000

Published by
**Sri Anil Kumar Singhal I.A.S.,**
Executive Officer,
T.T. Devasthanams,
Tirupati - 517 507.

*Printed at*
Adisri Screens
Tirupati - 517 501.

# ಅವತರಣಿಕೆ

ಶ್ರೀ ವೇಂಕಟಾಚಲದಲ್ಲಿ (ತಿರುಮಲೆ) ಶ್ರೀ ವೇಂಕಟೇಶನಿಗೆ ಪ್ರತಿನಿತ್ಯವೂ ನಡೆಯುವ ಕೈಂಕರ್ಯಗಳಲ್ಲಿ (ಸೇವೆಗಳಲ್ಲಿ) ಮೊದಲನೆಯದು ಸುಪ್ರಭಾತ ಅಥವಾ ವಿಶ್ವರೂಪದರ್ಶನ. ನಾವು ಅರುಣೋದಯದ ಸಮಯದಲ್ಲಿ ಭಗವನ್ಮಂದಿರವನ್ನು ಪ್ರವೇಶಿಸಿ, ಮಂದಿರದ ಸುವರ್ಣದ್ವಾರ (ಬಂಗಾರದ ಬಾಗಿಲು) ವನ್ನು ಸೇರಿದರೆ ಅಲ್ಲೊಂದು ಅದ್ಭುತವಾದ ದೃಶ್ಯವನ್ನು ಕಾಣುತ್ತೇವೆ. ಸುವರ್ಣದ್ವಾರ ಮುಚ್ಚಿರುತ್ತದೆ. ಹೊರಭಾಗದ ಎರಡು ಪಕ್ಕಗಳಲ್ಲಿಯೂ, ಚತುರ್ಭುಜರಾಗಿಯೂ, ಶಂಖ ಚಕ್ರಧಾರಿಗಳಾಗಿಯೂ ಇರುವ ತೇಜೋಮಯರಾದ ಇಬ್ಬರು ದ್ವಾರಪಾಲಕರ ಮೂರ್ತಿಗಳು ಪರಮಾತ್ಮನ ದರ್ಶನಾಕಾಂಕ್ಷಿಗಳ ಮನಸ್ಸನ್ನು ಭಗವಂತನೆಡೆಗೆ ಒಯ್ಯುತ್ತಿರುತ್ತವೆ. ಆ ಎರಡು ಮೂರ್ತಿಗಳ ಪಕ್ಕಗಳಲ್ಲಿಯೂ ಅಲ್ಲಿನ ಕೈಂಕರ್ಯಪರರೂ ಇತರ ಭಕ್ತರೂ ಸಾಲಾಗಿ ನಿಂತು-'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ' - ಎಂಬ ರೀತಿಯಲ್ಲಿ ಶ್ರೀನಿವಾಸನನ್ನು 'ಶ್ರೀವೇಂಕಟೇಶ ಸುಪ್ರಭಾತ'ವೇ ಮೊದಲಾದ ಸ್ತೋತ್ರಗಳಿಂದ ಸ್ತುತಿಸುತ್ತಿರುವಂತೆಯೇ ಸುವರ್ಣ ದ್ವಾರವು ತೆರೆಯುತ್ತದೆ. ನೋಡುನೋಡುತ್ತಿರುವಂತೆಯೇ ಕಣ್ಮನಗಳನ್ನು ತಣಿಸುವ ಶ್ರೀ ಶ್ರೀನಿವಾಸನ ದಿವ್ಯವಾದ ಆ ವಿಶ್ವರೂಪದರ್ಶನ, ಬಾಗಿಲನ್ನು ತೆರೆಯುತ್ತಿರುವಂತೆಯೇ ಘಮ ಘಮಿಸುವ ಧೂಪದ ಪರಿಮಳ, ಒಳಗೆ ಪರಮಾತ್ಮನ ಸನ್ನಿಧಿಗೆ ಹೋಗು ಹೋಗುತ್ತಿರುವಂತೆಯೇ ನಮಗೆ ಅಗೋಚರವಾದ ಯಾವುದೋ ಒಂದು ದೈವಿಕ ಶಕ್ತಿಯು ನಮ್ಮ ಭೌತಿಕ ಶರೀರವನ್ನು ಪರವಶವಾಗಿಸುವಿಕೆ, ಕೇಳುಕೇಳುತ್ತಿರುವಂತೆಯೇ ಭಕ್ತವೃಂದವು ಕಿವಿಗೆ ಇಂಪಾಗಿ ಹಾಡುತ್ತಿರುವ ಮೃದು ಮಧುರವಾದ ಮಂಗಳಾಶಾಸನ, ಪರಮಾತ್ಮನ ದಿವ್ಯ ದರ್ಶನವನ್ನು ಪಡೆದು ಧನ್ಯರಾಗಿ ತೃಪ್ತರಾದರೂ, ಅತೃಪ್ತರಾಗಿ ತನ್ಮಯರಾಗಿ- ಆ ದಿವ್ಯಮಂಗಳ ಮೂರ್ತಿಯ ದರ್ಶನ ಭಾಗ್ಯ ವನ್ನು ಪಡೆಯುತ್ತಿರುವಂತೆಯೇ ಆತನ ಕರುಣಾರಸದಂತೆ ಅರ್ಚಕರ ಮೂಲಕ ಅನುಗ್ರಹಿಸಲ್ಪಡುವ ಪವಿತ್ರವಾದ 'ಏಲಾ ಲವಂಗ ಘನಸಾರ ಸುಗಂಧ ತೀರ್ಥ'- ಈ ರೀತಿಯಾಗಿ ಪಂಚೇಂದ್ರಿಯಗಳನ್ನೂ ಸೂರೆ ಗೊಳ್ಳುವ ಆ ವೈಭವವು ನಮ್ಮನ್ನು ಮೈಮರೆಸುತ್ತದೆ; ಆನಂದ ಸಾಮ್ರಾಜ್ಯದ ಸೊದೆಯೂಡಿಸುತ್ತದೆ.

ಇಂತಹ ಅಲೌಕಿಕ ಸುಖವನ್ನು ಅನುಭವಿಸಿದಂತೆಲ್ಲ ಪರಮ ಭಕ್ತರಾದ ಕುಲಶೇಖರರಾಜರು (ಕುಲಶೇಖರಾಳ್ವಾರ್) ಹೇಳಿದಂತೆ, ಹೇಳಿದಂತೆ ಮಾತ್ರವಲ್ಲ- ನಡೆದುಕೊಂಡಿರುವಂತೆ- 'ಪಡಿಯಾಯ್ ಕಿಡನ್ದು ಉನ್ ಪವಳ ವಾಯ್ ಕಾಣ್ಬೆನೇ'-ಎಂದರೆ, ಎಲೈ ಪರಮಾತ್ಮನೇ! ನಿನ್ನ ಸನ್ನಿಧಿಯಲ್ಲಿ ಅಚೇತನವಾದ ಹೊಸಿಲಾಗಿಯಾದರೂ ಇದ್ದು ಸದಾ ನಿನ್ನ ಹವಳದಂತಹ ಬಾಯನ್ನು ನೋಡುತ್ತಿರುತ್ತೇನೆ-ಎಂದು ನಮಗರಿಯದಂತೆಯೇ ನಮಗೂ ಅನ್ನಿಸುತ್ತದೆ. ಇದು ಶ್ರೀನಿವಾಸನ ಪ್ರತಿನಿತ್ಯ ಸೇವೆಗಳಲ್ಲಿ ಮೊದಲನೆಯ ದರ್ಶನ.

ಇಂತಹ ಸುಪ್ರಭಾತ ಸೇವೆಯ ಅಂಗವಾಗಿರುವ ಸುಪ್ರಭಾತಾದಿ ಸ್ತೋತ್ರರತ್ನಗಳ ಅರ್ಥವಾದರೂ ಏನು?

'ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮ ವಹಾಮ್ಯಹಂ'

ಎಂದು ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳುವುದರಲ್ಲಿ ನಿತ್ಯಜಾಗರೂಕನಾಗಿರುವ ಪರಮಾತ್ಮನನ್ನು ನಾವು 'ಸುಪ್ರಭಾತ'ವನ್ನು ಹೇಳಿ ಎಚ್ಚರಗೊಳಿಸುವುದಾದರೂ ಏನು? ಈ ವಿಚಾರಗಳನ್ನು ಸುಪ್ರಭಾತ ಪದ್ಯಗಳ ಅರ್ಥವನ್ನು ತಿಳಿದುಕೊಳ್ಳುವುದರಿಂದಲೇ ಗ್ರಹಿಸಬಹುದಾದುದರಿಂದ ಕ್ರಮವಾಗಿ ಅವುಗಳ ಅರ್ಥವನ್ನು ನೋಡೋಣ.

|| ಶ್ರೀಃ ||

ಶ್ರೀ ಶ್ರಿಯೈ ನಮಃ

# ಶ್ರೀ ವೇಂಕಟೇಶ ಸುಪ್ರಭಾತ

**ಕೌಸಲ್ಯಾ ಸುಪ್ರಜಾರಾಮ!**
**ಪೂರ್ವಾ ಸಂಧ್ಯಾ ಪ್ರವರ್ತತೇ।**
**ಉತ್ತಿಷ್ಠ ನರಶಾರ್ದೂಲ**
**ಕರ್ತವ್ಯಂ ದೈವಮಾಹ್ನಿಕಮ್॥ ೧ ॥**

'ಕೌಸಲ್ಯೆಯು ಸುಪುತ್ರವತಿ; ಪುರುಷಶ್ರೇಷ್ಠನಾದ ಎಲೈ ರಾಮ। ಇದೋ ಪೂರ್ವ ಸಂಧ್ಯೆಯು ಪ್ರಾದುರ್ಭವಿಸುತ್ತಿದೆ; ಏಳೆಲೌ-ನರಶ್ರೇಷ್ಠ! ದೇವಸಂಬಂಧಿಯಾದ ಆಹ್ನಿಕವು ಅನುಷ್ಠೇಯವಾಗಿದೆ' ಇದು ಸಾಮಾನ್ಯವಾಗಿ ಇದರ ಅರ್ಥ. ಈ ಪದ್ಯವು ಶ್ರೀಮದ್ರಾಮಾಯಣದ ಬಾಲಕಾಂಡದಲ್ಲಿ ವಿಶ್ವಾಮಿತ್ರ ಮಹರ್ಷಿಯು-ತಾನು ಮಾಡಬೇಕಾಗಿರುವ ಯಜ್ಞದ ಸಂರಕ್ಷಣೆಗಾಗಿ ಶ್ರೀರಾಮ ಲಕ್ಷ್ಮಣರನ್ನು ತನ್ನೊಡನೆ ಕರೆದುಕೊಂಡು ಹೋಗುತ್ತಿರುವಾಗ, ಸರಯೂನದೀ ತೀರದಲ್ಲಿ ಶ್ರೀರಾಮನು ರಾತ್ರಿಯನ್ನು ಸುಖ ನಿದ್ರೆಯಲ್ಲಿ ಕಳೆಯುತ್ತಿರಲು, ಪ್ರಭಾತವಾಗುತ್ತಿರುವಂತೆಯೇ ಶ್ರೀರಾಮನನ್ನು ಎಚ್ಚರಗೊಳಿಸಲು ಹೇಳಿದ ಮಾತು. ಇದು ಶ್ರೀವೇಂಕಟೇಶ ಸುಪ್ರಭಾತದ ಆದಿಯಲ್ಲಿ ಏಕೆ ಬರ ಬೇಕು-ಎಂದರೆ, ಕಾರಣಾಂತರಗಳಿಂದ ಸಾವಿರಾರು ನಾಮಧೇಯಗಳನ್ನುಳ್ಳ ಪರಮಾತ್ಮನಿಗೆ ರಾಮನೆಂಬ ಹೆಸರೂ, ಶ್ರೀನಿವಾಸನೆಂಬ ಹೆಸರೂ ಬೇರೆ ಬೇರೆಯಲ್ಲ. 'ದೇವನೊಬ್ಬ; ನಾಮ ಹಲವು' ಇದು ಒಂದು ಕಾರಣ. ಎರಡನೆಯದಾಗಿ ಶ್ರೀನಿವಾಸನೂ ಜಗತ್ಕಲ್ಯಾಣಕಾಮನಾಗಿಯೇ ನೆಲೆಸಿರುವುದರಿಂದಲೂ, ಶ್ರೀರಾಮಚಂದ್ರನೂ ಅದೇ ಉದ್ದೇಶದಿಂದಲೇ ಅವತರಿಸಿದ್ದುದರಿಂದಲೂ ಈ ಪದ್ಯವನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಪ್ರಕೃತ, ಈ ಪದ್ಯದಲ್ಲಿ ತೋರುವ ವಿಶೇಷಾರ್ಥವನ್ನೂ ಮುಂದಿನ ಪದ್ಯಗಳ ಅಭಿಪ್ರಾಯವನ್ನೂ ಗಮನಿಸೋಣ.

ಮಹರ್ಷಿಯಾದ ವಿಶ್ವಾಮಿತ್ರನು ರಾಮನನ್ನು ಸಂಬೋಧಿಸುತ್ತಾ 'ಕೌಸಲ್ಯಾ ಸುಪ್ರಜಾ'- ಎನ್ನುತ್ತಾನೆ. ಕೌಸಲ್ಯೆಯು ಸುಪುತ್ರವತಿಯೆಂದು ಕೆಲವರೂ, ಕೌಸಲ್ಯೆಯ ಸುಪುತ್ರನೇ - ಎಂದು ಕೆಲವರೂ ಇದರ

ಅರ್ಥವನ್ನು ಹೇಳುತ್ತಾರೆ. ಯಾವ ರೀತಿಯಿಂದ ಹೇಳಿದರೂ ಈ ಅರ್ಥವು ಬಹು ಗಂಭೀರವೂ, ಉದಾತ್ತವೂ ಆಗಿರುತ್ತದೆ. ಕೌಸಲ್ಯೆ ಮತ್ತು ದಶರಥ ಇವರಿಬ್ಬರ ತಪಸ್ಸಿನ ಫಲವಾಗಿ ಶ್ರೀರಾಮನು ಅವತರಿಸಿದ್ದರೂ ಸಹ ಕೌಸಲ್ಯೆಯ ಸುಪುತ್ರನೆಂದು ಹೇಳುವುದರಿಂದ ತಂದೆಗಿಂತಲೂ ತಾಯಿಯದೇ ಪ್ರಾಧಾನ್ಯವೆಂದು ತೋರುತ್ತದೆ. 'ಮಾತೃದೇವೋ ಭವ, ಪಿತೃದೇವೋ ಭವ', 'ಮಾತಾ ಪೂರ್ವರೂಪಮ್ ಪಿತಾ ಉತ್ತರ ರೂಪಮ್'- ಎಂಬ ಶ್ರುತಿವಾಕ್ಯಗಳೂ 'ಪಿತುಃ ಶತಗುಣಂ ಮಾತಾ'- ಎಂಬ ಸ್ಮೃತಿವಾಕ್ಯವೂ ಇದನ್ನು ಪುಷ್ಟೀಕರಿಸುತ್ತವೆ. ಇನ್ನೊಂದು ರೀತಿಯಿಂದಲೂ ನಾವು ಇದನ್ನು ಆಲೋಚಿಸಬಹುದು. ವಿಶ್ವಾಮಿತ್ರನು ರಾಮನನ್ನು ತನ್ನೊಡನೆ ಕಳುಹಿಸಿ ಕೊಡಬೇಕೆಂದು ತಿಳಿಸುವಾಗ ದಶರಥನನ್ನು ಸಮಾಧಾನಪಡಿಸಲು-

**'ಅಹಂ ವೇದ್ಮಿ ಮಹಾತ್ಮಾನಂ**
**ರಾಮಂ ಸತ್ಯ ಪರಾಕ್ರಮಮ್ ।**
**ವಸಿಷ್ಠೋऽಪಿ ಮಹಾತೇಜಾ**
**ಯೇ ಚೇಮೇ ತಪಸಿ ಸ್ಥಿತಾಃ ॥'**

ಎಂದರೆ, 'ರಾಮನು ಪರಮ ಪುರುಷನೆಂಬುದನ್ನು ತಪೋನಿಷ್ಠನಾದ ನಾನು ಬಲ್ಲೆ; ಮಹಾತೇಜಸ್ವಿಯಾದ ವಸಿಷ್ಠನು ಬಲ್ಲನು; ಅಂತೆಯೇ ತಪೋನಿರತರಾದ ಇತರರು ಬಲ್ಲರು; ಕೇವಲ ಪುತ್ರಮೋಹದಿಂದ ನೀನು ಇವನನ್ನು ಅರಿಯಲಾರದಿರುವೆ'- ಎಂದು ಅನೇಕ ವಿಧವಾಗಿ ಬೋಧಿಸಿದರೂ ದಶರಥನು 'ದುಃಖೇನೋತ್ಪಾದಿತಶ್ಚಾऽಯಂ ನ ರಾಮಂ ನೇತುಮರ್ಹಸಿ'- ಎಂದು ಹೇಳುತ್ತ, ಕಡೆಗೆ ಕುಲಪುರೋಹಿತನಾದ ವಸಿಷ್ಠನ ಮಾತಿನಂತೆ ಬಹು ಕಷ್ಟದಿಂದ ಕಳುಹಿಸಲು ಒಪ್ಪುತ್ತಾನೆ. ಆದರೆ ಮಾತೆಯಾದ ಕೌಸಲ್ಯೆಯು ಪುತ್ರ ವಾತ್ಸಲ್ಯದಿಂದ ಕೂಡಿದ್ದರೂ ಸಹ ರಾಮನನ್ನು ವಿಶ್ವಾಮಿತ್ರನೊಡನೆ ಕಳುಹಿಸಲು ತಡೆಯುವುದಿಲ್ಲ. ಈ ರೀತಿಯಾದ ಇವರಿಬ್ಬರ ತಾರತಮ್ಯವನ್ನು ಗಮನಿಸಿ - ''ಕೌಸಲ್ಯಾ ಸುಪ್ರಜಾ'' ಎಂದು ಮುನಿಯು ಕರೆದಿರುವನು. ಇಂತಹ ಸುಪುತ್ರನಾದ ರಾಮನೇ! 'ಪೂರ್ವಾಸಂಧ್ಯಾ ಪ್ರವರ್ತತೇ'- ಎಂದರೆ ಪೂರ್ವ ಸಂಧ್ಯೆಯು ಸೂರ್ಯನನ್ನು ಉದಯಗೊಳಿಸಿದಂತೆ ನಿನ್ನ ಜನನಿಯಾದ ಕೌಸಲ್ಯೆಯು, ರಾಮ ದಿವಾಕರನಾದ ನಿನ್ನ ಆವಿರ್ಭಾವಕ್ಕೆ ಕಾರಣಳಾಗಿ

ಧನ್ಯಳಾದಳೆಂದೂ, ಜನನಿಯನ್ನು ಸೇವಿಸುವಂತೆ ಪ್ರವರ್ತಿಸುತ್ತಿರುವ ಪೂರ್ವಸಂಧ್ಯೆಯ ಉಪಾಸನೆಯನ್ನು ಮಾಡು - ಎಂದೂ, ಇದೋ ಸಹಸ್ರಾಂಶುವು ಉದಿಸುತ್ತಲೇ ಅಂಧಕಾರವನ್ನು ತೊಳೆದು ಹಾಕುತ್ತಿರುವನು; ಅದರಂತೆ ಜಗತ್ಕಂಟಕರಾದ ವಿರೋಧಿಗಳನ್ನು ನಿಗ್ರಹಿಸಲು ಇದು ಆರಂಭ ಕಾಲವೆಂದೂ, ಇಷ್ಟು ದೀರ್ಘ ಕಾಲದ ತಪಸ್ಸಿನ ಫಲವಾಗಿ ನಿನ್ನನ್ನು ಸಾಕ್ಷಾತ್ಕರಿಸಿಕೊಂಡ ನನ್ನ ಅಜ್ಞಾನಾಂಧಕಾರವು ತೊಲಗಿತು- ''ಸುಪ್ರಭಾತ'' ವಾಯಿತೆಂದೂ, ಇಲ್ಲಿಯವರಿಗೆ ಪ್ರಪಂಚದಲ್ಲಿ ತಮೋಗುಣವು ಪ್ರಸರಿಸಿದ್ದು ರಾಮ ದಿವಾಕರನಾದ ನಿನ್ನ ಉದಯದಿಂದ ಸತ್ತ್ವೋದ್ರೇಕ ಕಾಲವು ಒದಗಿತೆಂದೂ-ಇದರ ಅಭಿಪ್ರಾಯವನ್ನು ತಿಳಿಯಬಹುದು. 'ನರಶಾರ್ದೂಲ'- ಎಂಬುದರಿಂದ ಪುರುಷ ಶ್ರೇಷ್ಠನೆಂಬ ಅರ್ಥವು ಬರುತ್ತದೆ. ಪುರುಷ ಶ್ರೇಷ್ಠನಾದ ನೀನು ಕರ್ತವ್ಯದಲ್ಲಿ ಆಲಸನಾಗಿರಬಾರದು. ಏಕೆಂದರೆ ನೀನು ಆಲಸನಾದರೆ ಇತರರೂ ಆಲಸರಾಗುವರಲ್ಲವೆ!

**'ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥'**

- ಎಂಬಂತೆ ಶ್ರೇಷ್ಠನಾದವನು ಇತರರಿಗೆ ಆದರ್ಶಪ್ರಾಯನಾಗಿರಬೇಕೆಂಬುದೂ, ಮುಖ್ಯವಾಗಿ ಜಗದುಜ್ಜೀವನಕ್ಕಾಗಿಯೇ ಇರುವ ಶಾಸ್ತ್ರ ಮರ್ಯಾದೆಯನ್ನು ತೃಣೀಕರಿಸಿದ ಚೇತನರ ಮಧ್ಯೆ ಅವತರಿಸಿ ಯಾವನಾದರೊಬ್ಬ ರಾಜನು ತನ್ನ ಆಜ್ಞೆಯನ್ನು ಉಲ್ಲಂಘಿಸಿದ ವಿರೋಧಿಗಳನ್ನು ತಾನೇ ಉಪಾಯದಿಂದ ವಶೀಕರಿಸುವಂತೆ ಅವರನ್ನು ಕರ್ತವ್ಯಪರರನ್ನಾಗಿ ಮಾಡಬೇಕೆಂದೂ ತಿಳಿದು ಬರುತ್ತದೆ. 'ಕರ್ತವ್ಯಂ ದೈವಮಾಹ್ನಿಕಂ'- ಎಂಬುದರಿಂದ ಭಗವದಾಜ್ಞಾರೂಪವಾದ ನಿತ್ಯ ಕರ್ಮವು ಅಗತ್ಯವಾಗಿ ಮಾಡಲು ಯೋಗ್ಯವಾದುದೆಂದೂ, ಶ್ರೀರಾಮನು ಸಾಕ್ಷಾತ್ ಪರಮಾತ್ಮನಾದುದರಿಂದ ವಿಶ್ವಾಮಿತ್ರನು ತಾನು ಮಾಡುವ ಕರ್ಮವು ಭಗವದಾಜ್ಞಾರೂಪವಾಗಿಯೂ, ಭಗವತ್ ಕೈಂಕರ್ಯ ರೂಪವಾಗಿಯೂ ಇರುವುದರಂದ- ''ರಾಮ! ಏಳು; ಇದನ್ನು ಸ್ವೀಕರಿಸು''- ಎಂದು ರಾಮನಿಗೆ ನಿವೇದಿಸುವಂತೆಯೂ ವ್ಯಕ್ತವಾಗುತ್ತದೆ.

ಪರಮಮಂಗಳಸ್ವರೂಪನಾದ ಪರಮಾತ್ಮನನ್ನು ಸ್ವಾಭಿಮುಖನನ್ನಾಗಿ ಮಾಡಿಕೊಳ್ಳಲು ಭಕ್ತನು ಈ ರೀತಿ ಸಂಬೋಧಿಸಿ ಪ್ರಾರ್ಥಿಸುತಾನೆ-

**ಉತ್ತಿಷ್ಠೋತ್ತಿಷ್ಠ ಗೋವಿಂದ!**
**ಉತ್ತಿಷ್ಠ ಗರುಡಧ್ವಜ।**
**ಉತ್ತಿಷ್ಠ ಕಮಲಾಕಾಂತ!**
**ತ್ರೈಲೋಕ್ಯಂ ಮಂಗಳಂ ಕುರು॥ ೨ ॥**

ಗೋವಿಂದನೇ ಏಳು; ಗರುಡಧ್ವಜನೇ ಏಳು; ಕಮಲಾಕಾಂತನೇ ಏಳು; ಮೂರು ಲೋಕಗಳನ್ನು ಮಂಗಳಯುತವಾಗಿ ಮಾಡು. ಇದು ಸಾಮಾನ್ಯವಾದ ಅರ್ಥ. ಇಲ್ಲಿ 'ಗೋವಿಂದ'-ಎಂದು ಕರೆಯುವುದರಿಂದ ಪರಮಾತ್ಮನ ಆಶ್ರಿತರಲ್ಲಿರುವ ಸೌಲಭ್ಯವೂ, ಭಕ್ತರಲ್ಲಿರುವ ವಾತ್ಸಲ್ಯವೂ ವ್ಯಕ್ತವಾಗುತ್ತವೆ. ಹೇಗೆಂದರೆ, ತಾನು ಸಕಲಕಲ್ಯಾಣಗುಣಪರಿಪೂರ್ಣನಾಗಿ, ಆಶ್ರಯಿಸುವ ಚೇತನರ ಇಂದ್ರಿಯಗಳಿಗೆ ಆಗೋಚರನಾದರೂ ಅವರಲ್ಲಿ ನಿರ್ಹೇತುಕವಾದ ಕೃಪೆಯಿಂದ ಒಂದು ಕಾಲದಲ್ಲಿ ಚೇತನರ ಮಧ್ಯೆ ಶ್ರೀಕೃಷ್ಣನಾಗಿ ಅವತರಿಸಿದನು. 'ಗೋಪಾಲ'ನಾಗಿ ತನ್ನ ಸೌಲಭ್ಯವನ್ನು ತೋರಿಸಿಕೊಂಡನು. ಅಜ್ಞಾನಿಗಳಾದ ಜೀವಕೋಟಿಗಳಿಗೆ ತನ್ನ ಪರತತ್ತ್ವವನ್ನು ವ್ಯಕ್ತಪಡಿಸಲು ಬೃಂದಾವನದಲ್ಲಿ ಶಕ್ರ (ಇಂದ್ರ) ಪರಾಭವ ಮಾಡಿ, ಆತನಿಂದ 'ಗೋವಿಂದ'-ಎಂದರೆ ಕೇವಲ ಗೋವುಗಳನ್ನು ರಕ್ಷಿಸಿ, ಅವುಗಳ ಇಂದ್ರನು ಮಾತ್ರವೇ ಅಲ್ಲ - ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜಾಡ್ಯ ಮಾಂದ್ಯಾದಿ ದೋಷಗಳಿಂದ ಕೂಡಿದ ಸಮಸ್ತ ಚೇತನರಿಗೂ ತಾನು ಅಧಿಪತಿ ಎಂಬುದನ್ನು ಸ್ಪಷ್ಟಪಡಿಸಿದನು. 'ಗರುಡಧ್ವಜ'ನೆಂದು ಸಂಬೋಧಿಸುವುದರಿಂದ ಮಂಗಳ ಸ್ವರೂಪನೆಂಬುದು ವ್ಯಕ್ತವಾಗುತ್ತದೆ. 'ಮಂಗಳಂ ಭಗವಾನ್ ವಿಷ್ಣುಃ, ಮಂಗಳಂ ಗರುಡಧ್ವಜಃ'-ಎಂದು ಹಿರಿಯರು ಸ್ತುತಿಸಿರುವುದು ಇದನ್ನು ಪುಷ್ಟೀಕರಿಸುತ್ತದೆ. ಸ್ವತಃ ಯಾವನು ಮಂಗಳಕರನೋ ಅವನೇ ತ್ರಿಲೋಕವನ್ನು ಮಂಗಳವನ್ನಾಗಿ ಮಾಡಲು ಸಮರ್ಥನೆಂಬುದನ್ನು ನಾವು ತಿಳಿಯಬಹುದು. ''ಕಮಲಾಕಾಂತ'' ಎಂದು ಪ್ರಬೋಧನಗೊಳಿಸುವುದರಿಂದ ಮಂಗಳಕರನಾದ ಪರಮಾತ್ಮನನ್ನು ಆಶ್ರಯಿಸಲು ಚೇತನರಿಗೆ 'ಪುರುಷಕಾರ' ಸ್ವರೂಪಳಾದ ಶ್ರೀದೇವಿಯು ಸಹಾಯಕಳೆಂದೂ, ಅಂತಹ ಶ್ರೀದೇವಿಯಿಂದ ಅವಿನಾಭೂತನಾದ ದೇವನೇ ಸುಲಭನೆಂದೂ ವಾಂಛಿತಫಲಪ್ರದಾತನೆಂದೂ ತಿಳಿದು ಬರುತ್ತದೆ. ಆದುದರಿಂದ, ಇಂತಹ ಮಂಗಳ ಸ್ವರೂಪನಾದ ದೇವನೆ! ತ್ರಿಲೋಕವನ್ನು ಮಂಗಳಯುತವನ್ನಾಗಿ ಮಾಡು.

'''ಸುಪ್ರಭಾತ'' ಕೀರ್ತನದಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಅನುಕೂಲಿಸುವಂತೆ ಪುರುಷಕಾರ ಸ್ವರೂಪ ಳಾಗಿಯೂ, ಜಗನ್ಮಾತೆಯೂ ಆದ ಶ್ರೀದೇವಿಯನ್ನು ಸುಪ್ರಭಾತದಿಂದ ಭಕ್ತನು ಮೊದಲು ಪ್ರಾರ್ಥಿಸುತ್ತಾನೆ-

**ಮಾತಸ್ಸಮಸ್ತ ಜಗತಾಂ ಮಧುಕೈಟಭಾರೇಃ**
**ವಕ್ಷೋವಿಹಾರಿಣಿ ಮನೋಹರ ದಿವ್ಯಮೂರ್ತೇ।**
**ಶ್ರೀಸ್ವಾಮಿನಿ ಶ್ರಿತಜನಪ್ರಿಯದಾನಶೀಲೇ**
**ಶ್ರೀ ವೇಂಕಟೇಶದಯಿತೇ ತವ ಸುಪ್ರಭಾತಮ್॥ ೩ ॥**

ಸಮಸ್ತ ಲೋಕಗಳಿಗೂ ಮಾತೆಯೂ, ಮಧುಕೈಟಭರೆಂಬ ದಾನವರನ್ನು ಮರ್ದಿಸಿದ ದಾನವಾರಿಯ ಎದೆಯಲ್ಲಿ ವಿಹರಿಸುವವಳೂ, ಮನೋಹರ ದಿವ್ಯಸ್ವರೂಪವುಳ್ಳವಳೂ, ಆಶ್ರಿತರಿಗೆ ಪ್ರಿಯವಾದುದನ್ನು ಕೊಡುವ ಸ್ವಭಾವವುಳ್ಳವಳೂ, ಶ್ರೀ ವೇಂಕಟೇಶನ ಪ್ರಿಯತಮೆಯೂ ಆದ ಎಲೌ ಶ್ರೀದೇವಿ! ನಿನಗೆ ಸುಪ್ರಭಾತವು.

ಸಮಸ್ತ ಲೋಕಗಳಿಗೂ ಮಾತೆ- ಎನ್ನುವುದರಿಂದ ಚೇತನರ ಇಷ್ಟಾರ್ಥ ಸಿದ್ಧಿಗೆ ಶ್ರೀದೇವಿಯು ಸಹಕಾರಿಣಿ (ಪುರುಷಕಾರ ಸ್ವರೂಪಳು), ಅಂದರೆ ಚೇತನರಪರವಾಗಿ ಪರಮಾತ್ಮನಲ್ಲಿ ಕರುಣೆಯನ್ನು ಉಂಟು ಮಾಡುವ ವಳು - ಎಂಬುದೂ, 'ಮಧುಕೈಟಭಾರಿಯ ವಕ್ಷೋವಿಹಾರಿಣಿ'- ಎನ್ನು ವುದರಿಂದ 'ಅನನ್ಯಾ ರಾಘವೇಣಾऽಹಂ ಭಾಸ್ಕರಸ್ಯ ಪ್ರಭಾ ಯಥಾ'- ಎಂದರೆ ಸೂರ್ಯನನ್ನು ಬಿಟ್ಟು ಅವನ ಪ್ರಭೆಯು ಹೇಗೆ ಇರಲಾರದೋ ಹಾಗೆಯೇ ನಾನು ಶ್ರೀರಾಮನನ್ನು ಬಿಟ್ಟಿರುವವಳಲ್ಲವೆಂದು ಸೀತಾ ದೇವಿಯು ಹೇಳಿರುವಂತೆ ಪುರುಷಕಾರ ಸ್ವರೂಪಳಾದ ಶ್ರೀದೇವಿಯೂ ಪರಮಾತ್ಮನನ್ನು ಎಂದಿಗೂ ಬಿಟ್ಟಿರುವುದಿಲ್ಲವೆಂದು ತಿಳಿಯುವುದರಿಂದ ಅಂತಹ ಶ್ರೀದೇವಿಯ ಪ್ರಸನ್ನತೆಯು ಚೇತನರ ಉಜ್ಜೀವನಕ್ಕೆ-ಪರ ಮಾತ್ಮನ ಕೃಪೆಗೆ ಅತ್ಯಂತ ಸಹಕಾರಿ ಎಂಬುದೂ, 'ಮನೋಹರ ದಿವ್ಯ ರೂಪೇ, ಶ್ರಿತ ಜನಪ್ರಿಯ ದಾನಶೀಲೇ'- ಎನ್ನುವುದರಿಂದ ಶಿಸುಗಳಲ್ಲಿ ವಾತ್ಸಲ್ಯವನ್ನು ಸೂಚಿಸುವ ಮಾತೆಯ ಅವ್ಯಾಜವಾದ ಕರುಣೆ ಮತ್ತು ಪ್ರೇಮರೂಪವಾದ ಜಗನ್ಮಾತೆಯ ಸ್ವರೂಪ ಸ್ವಭಾವ ಗುಣಗಳು ಭಾಸ ವಾಗುವುದರಿಂದ ಚೇತನರು ಜಗನ್ಮಾತೆಯನ್ನು ಆಶ್ರಯಿಸಿ, ತಮ್ಮ ಇಷ್ಟ ಸಿದ್ಧಿಯ ವಿಚಾರದಲ್ಲಿ ನಿಶ್ಚಿಂತರಾಗಿರಬಹುದೆಂಬುದೂ 'ಶ್ರೀಸ್ವಾಮಿನಿ'

ಎನ್ನುವುದರಿಂದ 'ಶ್ರಯತೀತಿ ಶ್ರೀಃ' -'ಶ್ರೀಯತೇ ಇತಿ ಶ್ರೀಃ' ಎಂದರೆ ತಾನು ಚೇತನರ ಉಜ್ಜೀವನಕ್ಕಾಗಿ ಪರಮಾತ್ಮನನ್ನು ಆಶ್ರಯಿಸುವುದರಿಂದ 'ಶ್ರೀ'- ಎಂದೂ, ಪರಮಾತ್ಮನಿಗಾಗಿ ಚೇತನರಿಂದ ತಾನು ಆಶ್ರಯಿಸಲ್ಪಡುವುದರಿಂದ 'ಶ್ರೀ' ಎಂದು ಕರೆಯಲ್ಪಡುವುದರಿಂದ ಅಂತಹ ಜಗನ್ಮಾತೆಯ ಅನುಗ್ರಹವು ಆತ್ಮೋದ್ಧಾರದ ಪರಿಷ್ಕೃತವಾದ ಉಪಾಯವೆಂಬುದೂ ಸ್ಪಷ್ಟವಾಗುತ್ತದೆ. ಆದುದರಿಂದ- ಎಲೌ ಶ್ರೀದೇವಿ! ನಿನಗೆ ಸುಪ್ರಭಾತವಾಗಲಿ.

**ತವ ಸುಪ್ರಭಾತಮರವಿಂದಲೋಚನೇ**
**ಭವತು ಪ್ರಸನ್ನಮುಖಚಂದ್ರಮಂಡಲೇ।**
**ವಿಧಿಶಂಕರೇಂದ್ರವನಿತಾಭಿರರ್ಚಿತೇ**
**ವೃಷಶೈಲನಾಥ ದಯಿತೇ ದಯಾನಿಧೇ॥ ೪ ॥**

ಈ ಪದ್ಯದಲ್ಲಿಯೂ ಭಕ್ತನು ಶ್ರೀದೇವಿಯ ಗುಣಗಳನ್ನು ವರ್ಣಿಸುತ್ತಾ ಹೀಗೆ ಹೇಳುವನು: ಅರವಿಂದಲೋಚನಳೂ, ಚಂದ್ರಮಂಡಲದಂತಿರುವ ಪ್ರಸನ್ನವಾದ ಮುಖವುಳ್ಳವಳೂ, ಬ್ರಹ್ಮ, ಶಂಕರ, ಇಂದ್ರನೇ ಮೊದಲಾದವರ ಪತ್ನಿಯರಿಂದ ವಂದಿತಳೂ ವೃಷಶೈಲನಾಥನ (ಶ್ರೀ ವೇಂಕಟೇಶನ) ಪ್ರಿಯತಮೆಯೂ, ದಯಾನಿಧಿಯೂ ಆದ ಎಲೌ ಶ್ರೀದೇವಿಯೇ! ನಿನಗೆ ಸುಪ್ರಭಾತವಾಗಲಿ.

**ಅತ್ರ್ಯಾದಿ ಸಪ್ತಋಷಯಸ್ಸಮುಪಾಸ್ಯ ಸಂಧ್ಯಾಂ**
**ಆಕಾಶಸಿಂಧುಕಮಲಾನಿ ಮನೋಹರಾಣಿ।**
**ಆದಾಯ ಪಾದಯುಗ ಮರ್ಚಯಿತಂ ಪ್ರಪನ್ನಾಃ**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೫ ॥**

ಜಗನ್ಮಾತೆಯಾದ ಶ್ರೀದೇವಿಯನ್ನು ಸುಪ್ರಭಾತದಿಂದ ಪ್ರಾರ್ಥಿಸಿ, ಇಲ್ಲಿಂದ ಮುಂದೆ ಶ್ರೀ ವೇಂಕಟೇಶನನ್ನು ಸುಪ್ರಭಾತದಿಂದ ಭಕ್ತನು ಪ್ರಾರ್ಥಿಸುತ್ತಾನೆ.-

ಶೇಷಾದ್ರಿಗೆ ಶಿರೋಭೂಷಣನೂ, ಪ್ರಭುವೂ ಆದ ಎಲೈ ವೇಂಕಟೇಶನೇ! ಅತ್ರಿಯೇ ಮೊದಲಾದ ಸಪ್ತರ್ಷಿಗಳು ಪ್ರಾತಸ್ಸಂಧ್ಯೆಯ ಉಪಾಸನೆಯನ್ನು ಮಾಡಿ, ಮನೋಹರವಾದ ಆಕಾಶಗಂಗೆಯ ಕಮಲಗಳನ್ನು ತಂದು ನಿನ್ನ ಪಾದಯುಗ್ಮವನ್ನು ಅರ್ಚಿಸಲು ಬಂದಿರುವರು. ಆದ್ದರಿಂದ ನಿನಗೆ ಸುಪ್ರಭಾತವಾಗಲಿ.

**ಪಂಚಾನನಾಬ್ಜ ಭವಷಣ್ಮುಖವಾಸವಾದ್ಯಾಃ**
**ತ್ರೈವಿಕ್ರಮಾದಿಚರಿತಂ ವಿಬುಧಾಃ ಸ್ತುವಂತಿ।**
**ಭಾಷಾಪತಿಃ ಪಠತಿ ವಾಸರಶುದ್ಧಿಮಾರಾತ್**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೬ ॥**

ಶಂಕರ, ಬ್ರಹ್ಮ, ಷಣ್ಮುಖ, ಇಂದ್ರ ಸೇ ಮೊದಲಾದ ದೇವತೆಗಳು ತ್ರಿವಿಕ್ರಮಾವತಾರದ ಕಥೆಯೇ ಮೊದಲಾದ ನಿನ್ನ ಚರಿತೆಯನ್ನು ಹಾಡಿ ಹೊಗಳುತ್ತಿದ್ದಾರೆ. ವಾಕ್ಪತಿಯಾದ ಬೃಹಸ್ಪತಿಯು ದಿನ ಶುದ್ಧಿಯನ್ನು ಈಗಲೇ ಪಠಿಸುತ್ತಿದ್ದಾನೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

**ಈಷತ್ಪ್ರಫುಲ್ಲ ಸರಸೀರುಹ ನಾರಿಕೇಳ**
**ಪೂಗದ್ರುಮಾದಿಸುಮನೋಹರ ಪಾಲಿಕಾನಾಮ್।**
**ಆವಾತಿ ಮಂದಮನಿಲಸ್ಸಹ ದಿವ್ಯಗಂಧೈಃ**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೭ ॥**

ಈಗ ತಾನೇ ಸ್ವಲ್ಪ ಮಟ್ಟಿಗೆ ವಿಕಸಿತವಾಗಿರುವ ಕಮಲಗಳ, ಅಡಕೆ ಮೊದಲಾದವುಗಳ ಸಂಪರ್ಕವನ್ನು ಹೊಂದಿ ಸುಗಂಧಯುಕ್ತವಾದ ಮಾರುತವು ಮೆಲ್ಲಮೆಲ್ಲನೆ ಬೀಸುತ್ತಿದೆ. ಅಂದರೆ ಈಗ ತಾನೆ ಅರುಣೋದಯವಾಗುತ್ತಿದೆ. ಅದರ ಫಲವಾಗಿ ಹೂವುಗಳು ವಿಕಾಸಗೊಳ್ಳುತ್ತಿವೆ. ಅವುಗಳ ಮೇಲೆ ಹಾಯ್ದು ಬರುವ ಮಂದಮಾರುತವು ಹೊಸ ಚೈತನ್ಯವನ್ನುಂಟುಮಾಡುತ್ತಿದೆ; ಶೇಷಾದ್ರಿ, ಶೇಖರವಿಭೋ! ನಿನಗೆ ಸುಪ್ರಭಾತವು.

**ಉನ್ಮೀಲ್ಯನೇತ್ರಯುಗಮುತ್ತಮಪಂಜರಸ್ಥಾಃ**
**ಪಾತ್ರಾವಶಿಷ್ಟ ಕದಲೀಫಲ ಪಾಯಸಾನಿ।**
**ಭುಕ್ತ್ವಾಸಲೀಲಮಥ ಕೇಳಿಶುಕಾಃ ಪಠನ್ತಿ**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೮ ॥**

ಈಗ ತಾನೆ ಕಣ್ಣುಗಳನ್ನು ತೆರೆಯುತ್ತಿರುವ, ಪಂಜರದಲ್ಲಿ ವಿನೋದಾರ್ಥವಾಗಿ ಇರುವ ಗಿಳಿಗಳು ರಾತ್ರಿಯಲ್ಲಿ ಅವುಗಳ ಆಹಾರಕ್ಕಾಗಿ ಪಾತ್ರೆಗಳಲ್ಲಿ ಇಟ್ಟು ರಾತ್ರಿಯೇ ತಿಂದು ಉಳಿಸಿರುವ ಬಾಳೆಯ ಹಣ್ಣು ಪಾಯಸ ಮೊದಲಾದವನ್ನು ತಿಂದು ಸಂತೋಷದಿಂದ ಹಾಡುತ್ತಿವೆ. ಶೇಷಾದ್ರಿಶೇಖರ ವಿಭೋ! ನಿನಗೆ ಸುಪ್ರಭಾತವು.

**ತಂತ್ರೀಪ್ರಕರ್ಷಮಧುರಸ್ವನಯಾ ವಿಪಂಚ್ಯಾ**
**ಗಾಯತ್ಯನಂತಚರಿತಂ ತವ ನಾರದೋಽಪಿ।**
**ಭಾಷಾ ಸಮಗ್ರಮಸಕೃತ್ಕರಚಾರುರಮ್ಯಂ**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೯ ॥**

ದೇವರ್ಷಿಯಾದ ನಾರದನು ಶ್ರೇಷ್ಠವಾದ ತಂತಿಗಳಿರುವ ಮಧುರ ನಾದ ಧ್ವನಿಯನ್ನು ಕೊಡುವ ''ಮಹತಿ'ಯೆಂಬ ತನ್ನ ವೀಣೆಯನ್ನು ನುಡಿಸುತ್ತ ತನ್ನ ವೀಣಾವಾದನ ಚಮತ್ಕಾರವನ್ನು ತೋರಿಸುವ ಭಾಷೆಯಿಂದ ಸಮಗ್ರವಾದ ನಿನ್ನ ಚರಿತ್ರೆಯನ್ನು ಹಾಡುತ್ತಿರುವನು. ಶೇಷಾದ್ರಿ ಶೇಖರ ವಿಭೋ! ನಿನಗೆ ಸುಪ್ರಭಾತವು.

**ಭೃಂಗಾವಲೀ ಚ ಮಕರಂದರಸಾನುವಿದ್ಧ**
**ಝಂಕಾರಗೀತನಿನದೈಸ್ಸಹ ಸೇವನಾಯ।**
**ನಿರ್ಯಾತ್ಯುಪಾಂತ ಸರಸೀಕಮಲೋದರೇಭ್ಯಃ**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೧೦ ॥**

ಸಂಜೆಯ ಹೊತ್ತಿನಲ್ಲಿ ಪುಷ್ಪರಸವನ್ನು ಕುಡಿಯುತ್ತ ಕಮಲದೊಳಗೆ ಸೇರಿ ಹೋಗಿದ್ದ (ಸೂರ್ಯಾಸ್ತವಾಗಲು ಕಮಲವು ಮುಚ್ಚಿಕೊಳ್ಳುವುದರಿಂದ) ದುಂಬಿವಿಂಡು, ಈಗ ಸೂರ್ಯೋದಯವಾಗುತ್ತಿರಲು ಮಕರಂದ (ಪುಷ್ಪರಸ) ದೊಡನೆಯೇ ಝೇಂಕಾರರೂಪವಾದ ಗೀತಧ್ವನಿಗೈಯುತ್ತಾ ಕಮಲದ ಒಳಭಾಗದಿಂದ ನಿನ್ನ ಸೇವೆಗಾಗಿ ಇದೋ ಹೊರಬರುತ್ತಿವೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

**ಯೋಷಾಗಣೇನ ವರಧಧ್ನಿ ವಿಮಥ್ಯಮಾನೇ**
**ಘೋಷಾಲಯೇಷು ದಧಿಮಂಥನ ತೀವ್ರ ಘೋಷಾಃ।**
**ರೋಷಾತ್ಕಲಿಂ ವಿದಧತೇ ಕಕುಭಶ್ಚ ಕುಂಭಾಃ**
**ಶೇಷಾದ್ರಿಶೇಖರವಿಭೋ ತವ ಸುಪ್ರಭಾತಮ್॥ ೧೧ ॥**

ಗೊಲ್ಲರ ಮನೆಗಳಲ್ಲಿ ಸ್ತ್ರೀಯರು ಹೆಪ್ಪು ಹಾಕಿದ ಗಟ್ಟಿ ಮೊಸರನ್ನು ಕಡೆಯುತ್ತಿದ್ದರೆ, ಅದರಿಂದ ಉಂಟಾದ ಶಬ್ದದಿಂದಾಗಿ- ಮೊಸರನ್ನು ಕಡೆಯುವ ಕುಂಭಗಳು ದಿಕ್ಕುಗಳೊಡನೆ ಕೋಪದಿಂದ ಗುಡುಗಿ ಗರ್ಜಿಸುತ್ತಿರುವ ಭ್ರಾಂತಿಯನ್ನುಂಟು ಮಾಡುತ್ತಿವೆ; ಪರಸ್ಪರ ಜಗಳವಾಡುತ್ತಿರುವಂತಿದೆ. ಎಂದರೆ, ಆಗತಾನೇ ಅರುಣೋದಯ

ವಾಗುತ್ತಿರುವುದರಿಂದ ಎಲ್ಲೆಲ್ಲೂ ನಿಶ್ಶಬ್ದವು ಪರಡಿದೆ. ಅಂತಹ ಸಮಯದಲ್ಲಿ ಮೊಸರನ್ನು ಭಾರಿ ಭಾರಿ ಮಡಕೆಗಳಲ್ಲಿ ಕಡೆಯು ವುದರಿಂದ ಅದರ ಶಬ್ದವು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತದೆ. ಶೇಷಾದ್ರಿಶೇಖರವಿಭೋ! ನಿನಗೆ ಸುಪ್ರಭಾತವು.

**ಪದ್ಮೇಶಮಿತ್ರಶತಪತ್ರ ಗತಾಲಿವರ್ಗಾಃ**
**ಹರ್ತುಂ ಶ್ರಿಯಂ ಕುವಲಯಸ್ಯ ನಿಜಾಂಗಲಕ್ಷ್ಮ್ಯಾ।**
**ಭೇರಿ ನಿನಾದಮಿವ ಭಿಭ್ರತಿ ತೀವ್ರನಾದಂ**
**ಶೇಷಾದ್ರಿಶೇಖರವಿಭೋ! ತವ ಸುಪ್ರಭಾತಮ್॥ ೧೨ ॥**

ಕಮಲದೊಳಗೆ ಸೇರಿದ್ದು ಹೊರಗೆ ಬರುತ್ತಿರುವ ದುಂಬಿಗಳ ಸಮೂಹಗಳು ತಮ್ಮ ದೇಹಕಾಂತಿಯಿಂದ ಕನ್ನೈದಿಲೆಯ ಶ್ರೀಯನ್ನು (ಐಶ್ವರ್ಯವನ್ನು ಮತ್ತು ಕಾಂತಿಯನ್ನು) ಅಪಹರಿಸಲು ರಣಭೇರಿಯಂತೆ ತೀವ್ರವಾಗಿ ಝೇಂಕರಿಸುತ್ತಿವೆ. ಎಂದರೆ ಸ್ವಾಭಾವಿಕವಾಗಿ ದುಂಬಿಗಳು ಬೆಳಗಾಗುತ್ತಲೇ ಝೇಂಕರಿಸುತ್ತ ಹಾರಾಡುತ್ತಿರುತ್ತವೆ. ಬೆಳಗಾಗುತ್ತಲೇ ನೈದಿಲೆಯು ಮುಚ್ಚಿಕೊಳ್ಳುತ್ತದೆ; ಕಮಲವು ವಿಕಾಸಗೊಳ್ಳುತ್ತದೆ. ಆದರಿಂದ ಕಮಲದೊಳಗಿರುವ ದುಂಬಿಗಳು ಸ್ವಾಭಾವಿಕವಾದ ಕಪ್ಪು ದೇಹದ ಕಾಂತಿಯಿಂದ ಮುಚ್ಚಿಹೋಗುತ್ತಲಿರುವ ನೈದಿಲೆಯನ್ನು (ಅದೂ ಕಪ್ಪಾ ಗಿರುವುದರಿಂದ) ಸೋಲಿಸಿ ಜಯಭೇರಿಯನ್ನು ಮೊಳಗಿಸುತ್ತಿವೆಯೋ ಎಂಬಂತಿವೆ. ಶೇಷಾದ್ರಿ, ಶೇಖರವಿಭೋ! ನಿನಗೆ ಸುಪ್ರಭಾತವು.

**ಶ್ರೀಮನ್ನಭೀಷ್ಟ ವರದಾಖಿಲಲೋಕಬಂಧೋ**
**ಶ್ರೀ ಶ್ರೀನಿವಾಸ ಜಗದೇಕ ದಯೈಕಸಿಂಧೋಃ ।**
**ಶ್ರೀದೇವತಾಗೃಹಭುಜಾಂತರ ದಿವ್ಯಮೂರ್ತೇ**
**ಶ್ರೀವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೧೩ ॥**

ಶ್ರೀದೇವಿಯ ನಿತ್ಯಯೋಗವುಳ್ಳವನೂ, ಭಕ್ತರಿಗೆ ಅವರ ಇಷ್ಟ ಫಲ ಪ್ರದಾತನೂ, ಅಖಿಲಲೋಕ ಬಂಧುವೂ, ಜಗತ್ತಿಗೆ ಏಕಮಾತ್ರ ಕರುಣಾ ಸಮುದ್ರನೂ, ಶ್ರೀದೇವಿಗೆ ನಿತ್ಯ ವಾಸಸ್ಥಾನವಾದ ಎದೆಯುಳ್ಳವನೂ, ದಿವ್ಯಮಂಗಳ ಮೂರ್ತಿಯೂ, ಶ್ರೀವೇಂಕಟಾಚಲಪತಿಯೂ ಆದ ಶ್ರೀ ಶ್ರೀನಿವಾಸ! ನಿನಗೆ ಸುಪ್ರಭಾತವು. 'ಶ್ರೀದೇವತಾಗೃಹ ಭುಜಾಂತರ'- ಎನ್ನುವುದರಿಂದ ಪರಾಶರಭಟ್ಟರು ಶ್ರೀಗುಣರತ್ನ ಕೋಶದಲ್ಲಿ-

ಯದ್ಭ್ರೂಭಂಗಾಃ ಪ್ರಮಾಣಂ ಸ್ಥಿರಚರ ರಚನಾತಾರತಮ್ಯೇ ಮುರಾರೇಃ, ವೇದಾಂತಾಸ್ತತ್ತ್ವ ಚಿಂತಾ ಮುರಭಿದುರಸಿ ಯತ್ಪಾದ ಚಿಹ್ನೈಸ್ತರಂತಿ' - ಎಂದು ಹೇಳಿರುವಂತೆ - ಎಂದರೆ, ಶ್ರೀಮನ್ನಾರಾಯಣನ ಸ್ಥಾವರ ಜಂಗಮಾತ್ಮಕವಾದ ಸೃಷ್ಟಿಯ ವೈಚಿತ್ರ್ಯದಲ್ಲಿ ಆತನ ವಕ್ಷಸ್ಥಲದಲ್ಲಿರುವ ಯಾವ ದೇವಿಯ ಭ್ರೂ (ಹುಬ್ಬು) ವಿಕ್ಷೇಪಗಳು ಪ್ರಮಾಣವಾಗಿರುತ್ತವೆಯೋ, ವೇದಾಂತಗಳು ಯಾವನ ವಕ್ಷಸ್ಥಲದಲ್ಲಿರುವ ಶ್ರೀದೇವಿಯ ಪಾದಚಿಹ್ನೆಗಳಿಂದ ಇದೇ ಪರತತ್ತ್ವವೆಂದು (ಶ್ರೀಮನ್ನಾರಾಯಣನೇ ಪರತತ್ತ್ವವೆಂದು) ನಿರ್ಣಯಿಸುವುವೋ-ಅಂತಹ ಶ್ರೀದೇವಿ ಎಂದೂ, ಆ ಶ್ರೀದೇವಿಯ ನಿತ್ಯ ನಿವಾಸಸ್ಥಾನವಾದ ವಕ್ಷಸ್ಥಲವುಳ್ಳವನೆಂದೂ-ಅಂದರೆ, ಪರಮಕಾರಣಿಕನಾದ ಪರವಾಸುದೇವನೇ ಜಗತ್ತಿನ ಕಲ್ಯಾಣಕ್ಕಾಗಿ ಶ್ರೀನಿವಾಸನಾಗಿ ನೆಲೆಸಿರುವನೆಂದೂ ವ್ಯಕ್ತವಾಗುವುದು.

**ಶ್ರೀಸ್ವಾಮಿ ಪುಷ್ಕರಣಿಕಾಽಽಪ್ಲವ ನಿರ್ಮಲಾಂಗಾಃ**
**ಶ್ರೇಯೋಽರ್ಥಿನೋ ಹರವಿರಿಂಚಸನಂದನಾದ್ಯಾಃ।**
**ದ್ವಾರೇ ವಸಂತಿ ವರವೇತ್ರಹತೋತ್ತಮಾಂಗಾಃ**
**ಶ್ರೀವೇಂಕಟಾಚಲಪತೇ! ತವ ಸುಪ್ರಭಾತಮ್॥ ೧೪ ॥**

ಶ್ರೀಸ್ವಾಮಿ ಪುಷ್ಕರಿಣೀ ತೀರ್ಥದಲ್ಲಿ ಸ್ನಾನ ಮಾಡಿ ಪರಿಶುದ್ಧರಾಗಿರುವ ಶಿವ, ಬ್ರಹ್ಮ, ಸನಕ, ಸನಂದನರೇ ಮೊದಲಾದವರು ಶ್ರೇಯಃಕಾಂಕ್ಷಿಗಳಾಗಿ ನಾನು ಮೊದಲು ನಾನು ಮೊದಲೆಂದು ನಿನ್ನ ಬಾಗಿಲ ಬಳಿಗೆ ಬರುತ್ತಿರಲು ಅಲ್ಲಿನ ದ್ವಾರಪಾಲಕರು ತಮ್ಮ ಕೈಯಲ್ಲಿರುವ ಬೆತ್ತದಿಂದ ತಡೆಯುತ್ತಲಿರುವರು. ಅಂತಹ ಶ್ರೇಯೋಭಿಲಾಷಿಗಳಾದ ಹರಾದಿ ದೇವೋತ್ತಮರ ಗತಿಯೇ ಹೀಗಿರುವಾಗ ನಮ್ಮಂತಹವರ ಗತಿಯೇನು? ಎಲೌ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

**ಶ್ರೀಶೇಷಶೈಲ ಗರುಡಾಚಲ ವೇಂಕಟಾದ್ರಿ,**
**ನಾರಾಯಣಾದ್ರಿ, ವೃಷಭಾದ್ರಿ, ವೃಷಾದ್ರಿಮುಖ್ಯಾನ್।**
**ಆಖ್ಯಾಂ ತ್ವದೀಯವಸತೇರನಿಶಂ ವದಂತಿ**
**ಶ್ರೀವೇಂಕಟಾಚಲಪತೇ! ತವ ಸುಪ್ರಭಾತಮ್॥ ೧೫ ॥**

ಶ್ರೀವೇಂಕಟಾಚಲಪತೇ! ನಿನ್ನ ವಾಸಸ್ಥಾನವನ್ನು ಶ್ರೀಶೇಷಶೈಲವೆಂದೂ, ಗರುಡಾಚಲವೆಂದೂ, ವೆಂಕಟಾದ್ರಿ ಎಂದೂ, ನಾರಾಯಣಾದ್ರಿ ಎಂದೂ, ವೃಷಭಾದ್ರಿ ಎಂದೂ, ವೃಷಾದ್ರಿ ಎಂದೂ ಅನೇಕ ನಾಮಧೇಯಗಳಿಂದ ಕೀರ್ತಿಸುತ್ತಿರುವರು. ಅಂತಹ ಅನಂತ ನಾಮಧೇಯಗಳಿಗೆ ಕಾರಣನಾದ ಮಹಾ ಮಹಿಮನೇ! ನಿನಗೆ ಸುಪ್ರಭಾತವು. ಈಗ ಯಾವ ಯಾವ ಕಾರಣಗಳಿಂದ ಬೇರೆ ಬೇರೆ ಹೆಸರುಗಳು ಬಂದಿವೆ ಎಂಬುದನ್ನು ನೋಡೋಣ. ಶ್ರೀನಿವಾಸನ ಸ್ಥಾನವಾದ ಗಿರಿಯು ಸರ್ಪಾಕೃತಿಯಿಂದ ಇರುವುದರಿಂದಲೂ, ಶ್ರೀನಿವಾಸನು ಭೂಲೋಕದಲ್ಲಿ ನೆಲೆಸುವುದನ್ನು ತಿಳಿದು ಅವನಿಗೆ ''ಶೇಷ''ನಾದ ಶೇಷನೇ ಗಿರಿಯ ರೂಪವನ್ನು ತಾಳಿರುವನೆಂದು ಹೇಳುವುದರಿಂದ 'ಶೇಷಶೈಲ'ವೆಂದೂ, ಶ್ರೀಶ್ವೇತವರಾಹ ಕಲ್ಪದಲ್ಲಿ ಭೂದೇವಿಯ ಉದ್ಧಾರಕ್ಕಾಗಿ ವರಾಹ ಮೂರ್ತಿಯು ಉದ್ಭವಿಸಿ ಲೋಕಕಲ್ಯಾಣಕ್ಕಾಗಿ ಇಲ್ಲಿಯೇ ನೆಲೆಸಬೇಕೆಂದು ಚಿಂತಿಸಿ, ವೈಕುಂಠದಲ್ಲಿರುವ ತನ್ನ ಕ್ರೀಡಾ ಪರ್ವತವನ್ನೇ ಭೂಲೋಕಕ್ಕೆ ತರಬೇಕೆಂದು ಗರುಡನಿಗೆ ಆಜ್ಞಾಪಿಸಿದನೆಂದೂ, ಗರುಡನು ಹಾಗೆಯೇ ಕ್ರೀಡಾಗಿರಿಯನ್ನು ಸ್ಥಾಪಿಸಿದುದರಿಂದ ಗರುಡಾಚಲವೆಂದೂ, ಈ ಪರ್ವತ ಶ್ರೇಷ್ಠವನ್ನು ವೈಕುಂಠದಿಂದ ತಂದುದರಿಂದ ವೈಕುಂಠಾದ್ರಿ ಎಂದೂ.

**ವೇಂಕಾರೋಽಮೃತಬೀಜಂ ತು ಕಟಮೈಶ್ವರ್ಯ ಮುಚ್ಯತೇ।**
**ಅಮೃತೈಶ್ವರ್ಯ ಸಂಘಾತಾದ್ವೇಂಕಟಾದ್ರಿರಿತಿ ಸ್ಮೃತಃ॥**

-ಎಂದರೆ ವೇಂಕಾರವು ಅಮೃತ ಬೀಜವೆಂದೂ 'ಕಟ' ಅಂದರೆ ಐಶ್ವರ್ಯವೆಂದೂ ಇವೆರಡರ ಸಾಹಚರ್ಯವು ಈ ಗಿರಿಯಲ್ಲಿರುವುದರಿಂದ 'ವೇಂಕಟಾದ್ರಿ' ಎಂದೂ, ಹಿಂದೆ ನಾರಾಯಣನೆಂಬ ದ್ವಿಜನೊಬ್ಬನು ತಪಸ್ಸು ಮಾಡಿ, ಈ ಗಿರಿಗೆ ತನ್ನ ಹೆಸರನ್ನು ಇಡಬೇಕೆಂದು ಪರಮಾತ್ಮನನ್ನು ಕೇಳಿಕೊಂಡುದರಿಂದ 'ನಾರಾಯಣಾದ್ರಿ' ಎಂದೂ, ಧರ್ಮಮೂರ್ತಿಯು ತನ್ನ ಅಭಿವೃದ್ಧಿಗಾಗಿ ಅಲ್ಲಿ ತಪಸ್ಸನ್ನು ಮಾಡಿದುದರಿಂದ 'ವೃಷಾದ್ರಿ' ಎಂದೂ, ಜ್ಞಾನಪ್ರದವಾದುದರಿಂದ 'ಜ್ಞಾನಾದ್ರಿ' ಎಂದೂ, ಪವಿತ್ರ ತೀರ್ಥಮಯವಾದುದರಿಂದ 'ತೀರ್ಥಾದ್ರಿ' ಎಂದೂ, ಅನೇಕ ಪುಷ್ಕರಿಣಿ (ಸರೋವರ) ಗಳಿರುವುದರಿಂದ 'ಪುಷ್ಕರಾದ್ರಿ' ಎಂದೂ, ಪ್ರಹ್ಲಾದನ ಅನುಗ್ರಹಕ್ಕಾಗಿ ಈ ಗಿರಿ

ಯಿಂದಲೇ ಪರಮಾತ್ಮನು ನರಸಿಂಹಾಕೃತಿಯಿಂದ ಉದ್ಭವಿಸಿದುದರಿಂದ ಸಿಂಹಾಚಲವೆಂದೂ, ಅಂಜನಾದೇವಿಯು ಅಲ್ಲಿ ತಪಸ್ಸನ್ನು ಮಾಡಿ ಹನುಮಂತನನ್ನು ಪುತ್ರನನ್ನಾಗಿ ಪಡೆದುದರಿಂದ 'ಅಂಜನಾದ್ರಿ' ಎಂದೂ, ವರಾಹಮೂರ್ತಿಯ ಪವಿತ್ರ ಕ್ಷೇತ್ರವಾದುದರಿಂದ 'ವರಾಹಾದ್ರಿ', ಎಂದೂ, ನೀಲನೆಂಬ ವಾನರ ಶ್ರೇಷ್ಠನಿಗೆ ವಾಸಸ್ಥಾನವಾಗಿದ್ದುದರಿಂದ 'ನೀಲಾದ್ರಿ' ಎಂದೂ, ಶ್ರೀನಿವಾಸನ ನಿತ್ಯ ವಾಸಸ್ಥಾನವಾದುದರಿಂದ 'ಶ್ರೀನಿವಾಸಗಿರಿ' ಎಂದೂ, ದೇವೋತ್ತಮರು ಇದನ್ನು ನೋಡಿ ಆನಂದಿತರಾಗಿ 'ಆನಂದ'ವೆಂದು ಕರೆದುದರಿಂದ 'ಆನಂದಗಿರಿ' ಎಂದೂ, ಶ್ರೀಪ್ರದವಾದುದರಿಂದಲೂ ಶ್ರೀದೇವಿಯು ನೆಲೆಸಿರುವುದರಿಂದಲೂ 'ಶ್ರೀಶೈಲ'ವೆಂದೂ ಇನ್ನೂ ಹಲವಾರು ನಾಮಧೇಯಗಳಿಂದ ಪ್ರಸಿದ್ಧವಾಗಿದೆ.

**ಸೇವಾಪರಾಶ್ಶಿವಸುರೇಶಕೃಶಾನುಧರ್ಮ-**
**ರಕ್ಷೋಂಬುನಾಥ ಪವಮಾನ ಧನಾಧಿನಾಥಾಃ ।**
**ಬದ್ಧಾಂಜಲಿ ಪ್ರವಿಲಸನ್ನಿಜಶೀರ್ಷದೇಶಾಃ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್॥ ೧೬ ॥**

ಸೇವಾಪರರಾದ ಶಿವ, ಇಂದ್ರ, ಅಗ್ನಿ, ಯಮ, ವರುಣ, ವಾಯುದೇವ, ಕುಬೇರನೇ ಮೊದಲಾದವರು ಅಂಜಲೀಬಂಧದಿಂದ ಶೋಭಿಸುವ ತಲೆಯುಳ್ಳವರಾಗಿ ನಿನ್ನ ದರ್ಶನವನ್ನು ನಿರೀಕ್ಷಿಸುತ್ತಿದ್ದಾರೆ. ಆದುದರಿಂದ ಶ್ರೀವೇಂಕಟಾಚಲಪತೇ, ನಿನಗೆ ಸುಪ್ರಭಾತವು.

**ಧಾಟೀಷು ತೇ ವಿಹಗರಾಜ ಮೃಗಾಧಿರಾಜ-**
**ನಾಗಾಧಿರಾಜ ಗಜರಾಜ ಹಯಾಧಿರಾಜಾಃ ।**
**ಸ್ವಸ್ವಾಧಿಕಾರ ಮಹಿಮಾದಿಕಮರ್ಥಯಂತೇ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೧೭ ॥**

ಶ್ರೀವೇಂಕಟಾಚಲಪತೇ! ಇದೋ ಬೆಳಗಾಗುತ್ತಿರುವಂತೆಯೇ ಪಶುಶಾಲೆಯಲ್ಲಿಯೂ, ಮೃಗಾಲಯದಲ್ಲಿಯೂ ಪಶುಪಾಲಕರು ತಮ್ಮ ತಮ್ಮ ಅಧಿಕಾರವೇ ಮೊದಲಾದುವನ್ನು ನಿನ್ನಿಂದ ಪ್ರಾರ್ಥಿಸುತ್ತಿರುವರು. ಆದುದರಿಂದ ನಿನಗೆ ಸುಪ್ರಭಾತವಾಗಲಿ.

**ಸೂರ್ಯೇಂದುಭೌಮ ಬುಧವಾಕ್ಪತಿ ಕಾವ್ಯಸೌರಿ-**
**ಸ್ವರ್ಭಾನುಕೇತು ದಿವಿಷತ್ಪರಿಷತ್ಪ್ರಧಾನಾಃ ।**
**ತ್ವದ್ದಾಸದಾಸ ಚರಮಾವಧಿದಾಸ ದಾಸಾಃ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೧೮ ॥**

ಸೂರ್ಯನೇ ಮೊದಲಾದ ನವಗ್ರಹಾದಿ ದೇವತೆಗಳೂ ದೇವತೆಗಳ ಪ್ರಮುಖರೂ ನಿನ್ನ ಸೇವಾಪರರಾದ ದಾಸಾನುದಾಸರ ದಾಸರಾಗಿ ನಿನ್ನ ಸೇವೆ ಮಾಡಲು ನಿರೀಕ್ಷಿಸುತ್ತಿರುವರು. ಏಳೆಲೌ! ಶ್ರೀವೇಂಕಟಾಚಲಪತೇ! ನಿನಗೆ ಸುಪ್ರಭಾತವಾಗಲಿ.

**ತ್ವತ್ಪಾದಧೂಳಿಭರಿತ ಸ್ಫುರಿತೋತ್ತಮಾಂಗಾಃ**
**ಸ್ವರ್ಗಾಪವರ್ಗ ನಿರಪೇಕ್ಷ ನಿಜಾಂತರಂಗಾಃ ।**
**ಕಲ್ಪಾಗಮಾಽಽ ಕಲನಯಾಽಽಕುಲತಾಂ ಲಭಂತೇ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೧೯ ॥**

ಚೇತನರು ಪವಿತ್ರವಾದ ನಿನ್ನ ಪಾದಧೂಳಿಯಿಂದ ಅಲಂಕರಿಸಿದ ತಲೆಯುಳ್ಳವರಾಗಿ ಸ್ವರ್ಗವನ್ನಾಗಲೀ, ಮೋಕ್ಷವನ್ನಾಗಲೀ ತೃಣೀಕರಿಸಿರುತ್ತಾರೆ. ಅಷ್ಟು ಮಾತ್ರವಲ್ಲ, ಈ ಕಲ್ಪಾಂತದ ವ್ಯಾಕುಲತೆಯನ್ನು ತಪ್ಪಿಸಿ, ದಿವ್ಯದರ್ಶನವನ್ನು ಕೊಡಲು ನಿನಗೆ ಸುಪ್ರಭಾತವಾಗಲಿ.

**ತ್ವದ್ಗೋಪುರಾಗ್ರ, ಶಿಖರಾಣಿ ನಿರೀಕ್ಷಮಾಣಾಃ**
**ಸ್ವರ್ಗಾಪವರ್ಗಪದವೀಂ ಪರಮಾಂ ಶ್ರಯಂತಃ ।**
**ಮರ್ತ್ಯಾ ಮನುಷ್ಯಭುವನೇ ಮತಿಮಾಶ್ರಯಂತೇ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೨೦ ॥**

ಈ ಭೂಲೋಕದಲ್ಲಿಯೇ ಮನುಷ್ಯರು ನಿನ್ನ ಆಲಯದ ಗೋಪುರ ಶಿಖರವನ್ನು ನೋಡುತ್ತಲೇ ಸ್ವರ್ಗ ಮೋಕ್ಷಗಳ ಭಾವನೆಯನ್ನು ಹೊಂದಿರುತ್ತಾರೆ. ಅಂದರೆ, 'ತದ್ವಿಷ್ಣೋಃ ಪರಮಪದಂ ಸದಾ ಪಶ್ಯಂತಿ ಸೂರಯಃ' ಎಂದು ಹೇಳಿರುವಂತೆ ಯಾವುದೊಂದನ್ನು ತಿಳಿದರೆ ತಿಳಿಯ ಬೇಕಾದುದು ಮತ್ತೊಂದಿಲ್ಲವೋ, ಯಾವುದೊಂದನ್ನು ನೋಡಿದರೆ ನೋಡಬೇಕಾದುದು ಇನ್ನೊಂದಿಲ್ಲವೋ ಅಂತಹ 'ಪರಮಪದ'ದಲ್ಲಿದ್ದು ನಿತ್ಯಸೂರಿಗಳು ಯಾವ 'ಬ್ರಹ್ಮಾನಂದ'ವನ್ನು ಅನುಭವಿಸುವರೋ ಆ ಆನಂದವನ್ನು ನಿನ್ನ ವಿಮಾನ ದರ್ಶನದಿಂದಲೇ ಮನುಷ್ಯ... ...ಕ

ದಲ್ಲಿಯೇ ಭಕ್ತರು ಅನುಭವಿಸುತ್ತಿರುವರು. ಇನ್ನು ನಿನ್ನ ಪಾವನವಾದ ದರ್ಶನದ ಮಹಿಮೆಯನ್ನು ಎಂತು ವರ್ಣಿಸಲಿ! ಆದುದರಿಂದ ಭಕ್ತರಿಗೆ ದಿವ್ಯದರ್ಶನವನ್ನು ಕೊಡಲು ನಿನಗೆ ಸುಪ್ರಭಾತವಾಗಲಿ.

**ಶ್ರೀಭೂಮಿನಾಯಕ ದಯಾದಿಗುಣಾಮೃತಾಬ್ಧೇ**
**ದೇವಾದಿದೇವ ಜಗದೇಕ ಶರಣ್ಯಮೂರ್ತೇ ।**
**ಶ್ರೀಮನ್ನನಂತಗರುಡಾದಿಭಿರರ್ಚಿತಾಂಘ್ರೇ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೨೦ ॥**

ಶ್ರೀದೇವಿ ಮತ್ತು ಭೂದೇವಿಯರ ಪತಿಯೂ, ದಯೆ ಮೊದಲಾದ ಅಮೃತದಂತಹ ಗುಣಗಳಿಗೆ ಸಾಗರದಂತೆ ಇರುವನೂ, ದೇವಾಧಿ ದೇವನೂ, ಜಗತ್ತಿಗೆಲ್ಲ ರಕ್ಷಕ ಮೂರ್ತಿಯೂ, ಅನಂತ ಗರುಡ ವಿಷ್ವ ಕ್ಸೇನರೇ ಮೊದಲಾದ ನಿತ್ಯಸೂರಿಗಳಿಂದ ಪೂಜಿಸಲ್ಪಟ್ಟ ಪಾದಪದ್ಮವುಳ್ಳ ವನೂ ಆದ ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವಾಗಲಿ.

**ಶ್ರೀಪದ್ಮನಾಭ ಪುರುಷೋತ್ತಮ ವಾಸುದೇವ**
**ವೈಕುಂಠ ಮಾಧವ ಜನಾರ್ದನ ಚಕ್ರಪಾಣೇ ।**
**ಶ್ರೀವತ್ಸಚಿಹ್ನ ಶರಣಾಗತ ಪಾರಿಜಾತ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೨೧ ॥**

ಕಮಲವನ್ನು ನಾಭಿಯಲ್ಲಿ ಧರಿಸಿದವನೂ, ಪುರುಷರಲ್ಲಿ ಶ್ರೇಷ್ಠನೂ, ವಸುದೇವ ಪುತ್ರನಾದ ಶ್ರೀಕೃಷ್ಣನೂ, ಸರ್ವವ್ಯಾಪಿಯಾದ ವಾಸುದೇವ ಮೂರ್ತಿಯೂ, ವೈಕುಂಠನೂ, ಮಾಧವ(ಶ್ರಿಯಃಪತಿ)ನೂ, ಚಕ್ರ ಪಾಣಿಯೂ, ಶ್ರೀವತ್ಸದಿಂದ ಕೂಡಿದ ಅಂಕಿತ ವಕ್ಷಸ್ಥಲವುಳ್ಳವನೂ, ಮೊರೆ ಹೊಕ್ಕವರಿಗೆ ಪಾರಿಜಾತವೂ (ಬೇಕಾದುದನ್ನು ಕೊಡುವ ಕಲ್ಪವೃಕ್ಷ) ಆದ ಶ್ರೀವೇಂಕಟಾಚಲಪತೇ! ನಿನಗೆ ಸುಪ್ರಭಾತವು.

**ಕಂದರ್ಪದರ್ಪಹರಸುಂದರದಿವ್ಯಮೂರ್ತೇ**
**ಕಾಂತಾಕುಚಾಂಬುರುಹಕುಟ್ಮಲಲೋಲದೃಷ್ಟೇ ।**
**ಕಲ್ಯಾಣನಿರ್ಮಲಗುಣಾಕರದಿವ್ಯಕೀರ್ತೇ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೨೨ ॥**

ರೂಪದಲ್ಲಿ ಅಸದೃಶನೆನಿಸಿಕೊಂಡಿರುವ ಮನ್ಮಥನ ದರ್ಪವನ್ನು ಪುಡಿಪುಡಿ ಮಾಡುವಂತಹ ಅತಿಶಯ ಸುಂದರವೂ, ದಿವ್ಯವೂ

ಮಂಗಳವೂ ಆದ ಮೂರ್ತಿಯುಳ್ಳವನೂ, ಕಾಂತೆಯಾದ ಶ್ರೀದೇವಿಯ ಕಮಲದ ಮೊಗ್ಗಿನಂತಹ ಕುಚಗಳಲ್ಲಿ ಆಸಕ್ತ ದೃಷ್ಟಿಯುಳ್ಳವನೂ, ಪರಿಶುದ್ಧವಾದ ಸಮಸ್ತ ಕಲ್ಯಾಣ ಗುಣಾಗರನೂ, ದಿವ್ಯ ಕೀರ್ತಿಯುಳ್ಳವನೂ ಆದ ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

**ಮೀನಾಕೃತೇ! ಕಮಠ! ಕೋಲ! ನೃಸಿಂಹ! ವರ್ಣಿನ್!**
**ಸ್ವಾಮಿನ್ ಪರಶ್ವಥ ತಪೋಧನ! ರಾಮಚಂದ್ರ ।**
**ಶೇಷಾಂಶರಾಮ! ಯದುನಂದನ! ಕಲ್ಕಿರೂಪ ।**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೨೪ ॥**

ಪೀಡಿತರಾದ ಸಜ್ಜನರ ಮೊರೆಯನ್ನು ಕೇಳಿ, ಪರಮ ಕರುಣೆಯಿಂದ ಕೂಡಿ, ದುಷ್ಟ ಶಿಕ್ಷಣಕ್ಕಾಗಿಯೂ, ಶಿಷ್ಟ ಪರಿಪಾಲನೆಗಾಗಿಯೂ ಆಯಾ ಕಾಲಗಳಲ್ಲಿ ಮೀನಿನ ಆಕೃತಿಯುಳ್ಳವನಾಗಿಯೂ,(ವೇದೋದ್ಧಾರಕ್ಕಾಗಿ) ಆಮೆಯಾಗಿಯೂ, ವರಾಹಮೂರ್ತಿಯಾಗಿಯೂ, ಭಕ್ತವತ್ಸಲನಾದ ನರಸಿಂಹನಾಗಿಯೂ, ಬಲಿಭಂಜಕನಾದ ವಾಮನನಾಗಿಯೂ, ದುಷ್ಟ ಕ್ಷತ್ರಿಯ ದಮನನಾದ ಪರಶುರಾಮನಾಗಿಯೂ, ವಾಂಛಿತ ಫಲ ಪ್ರದಾತನಾದ ಶ್ರೀರಾಮಚಂದ್ರಮೂರ್ತಿಯಾಗಿಯೂ, ದುಷ್ಟರೆಂಬ ಗಜಗಳಿಗೆ ಸಿಂಹಪ್ರಾಯನಾದ ಶೇಷಾಂಶ ಸಂಭೂತನಾದ ಬಲರಾಮನಾಗಿಯೂ, 'ಪುಂಸಾಂ ಮೋಹನರೂಪ'ನಾದ ಶ್ರೀಕೃಷ್ಣನಾಗಿಯೂ, ಮುಂದೆ ಅವತರಿಸುವ ಮ್ಲೇಚ್ಛರನ್ನೂ ಮೂರ್ಛೆಗೊಳಿಸುವ ಕಲ್ಕಿರೂಪನಾಗಿಯೂ, ಇನ್ನೂ ಅನೇಕ ರೂಪಗಳಲ್ಲಿ ಅವತರಿಸಿದವನೂ ಆಗಿರುವ ಶ್ರೀ ವೇಂಕಟಾಚಲಪತೇ ನಿನಗೆ ಸುಪ್ರಭಾತವು.

**ಏಲಾಲವಂಗಘನಸಾರಸುಗಂಧಿ ತೀರ್ಥಂ**
**ದಿವ್ಯಂ ವಿಯತ್ಸರಿತಿ ಹೇಮಘಟೇಷು ಪೂರ್ಣಮ್ ।**
**ಧೃತ್ವಾಽದ್ಯ ವೈದಿಕಶಿಖಾಮಣಯಃ ಪ್ರಹೃಷ್ಟಾ -**
**ಸ್ತಿಷ್ಠಂತಿ ವೇಂಕಟಪತೇ! ತವ ಸುಪ್ರಭಾತಮ್ ॥ ೨೫ ॥**

ಏಲಕ್ಕಿ, ಲವಂಗ, ಪಚ್ಚಕರ್ಪೂರ, ಕೇಸರಿಯೇ ಮೊದಲಾದ ಪರಿಮಳ ದ್ರವ್ಯಗಳಿಂದ ಸುಗಂಧಯುಕ್ತವೂ ದಿವ್ಯವೂ ಆದ 'ಆಕಾಶಗಂಗೆ'ಯ ತೀರ್ಥವನ್ನು ಸುವರ್ಣ ಕುಂಭಗಳಲ್ಲಿ ತುಂಬಿಕೊಂಡು ಬಂದು, ವೈದಿಕ ಶ್ರೇಷ್ಠರು ಸಂತುಷ್ಟಚಿತ್ತರಾಗಿ ನಿನ್ನ ದಿವ್ಯದರ್ಶನಕ್ಕಾಗಿ ಕಾದು ನಿಂತಿರುವರು. ಆದುದರಿಂದ ಶ್ರೀ ವೇಂಕಟಾಚಲಪತೇ ನಿನಗೆ ಸುಪ್ರಭಾತವು.

**ಭಾಸ್ವಾನುದೇತಿ ವಿಕಚಾನಿ ಸರೋರುಹಾಣಿ**
**ಸಂಪೂರಯಂತಿ ನಿನದೈಃ ಕಕುಭೋ ವಿಹಂಗಾಃ ।**
**ಶ್ರೀವೈಷ್ಣವಾಸ್ಸತತ ಮರ್ಥಿತ ಮಂಗಲಾಸ್ತೇ**
**ಧಾಮಾಶ್ರಯಂತಿ ತವ ವೇಂಕಟ! ಸುಪ್ರಭಾತಮ್ ॥ ೧೭ ॥**

ಸೂರ್ಯನು ಉದಿಸುತ್ತಿರುವನು; ಕಮಲಗಳು ವಿಕಾಸಗೊಳ್ಳುತ್ತಿರುವುವು; ಪಕ್ಷಿಗಳು ಕಲಕಲ ಮಧುರವಾದ ತಮ್ಮ ಧ್ವನಿಗಳಿಂದ ದಿಕ್ಕುಗಳನ್ನು ಮೊಳಗಿಸುತ್ತಿರುವವು; ಶ್ರೀವೈಷ್ಣವರೂ ಒಂದೇ ಸಮವಾಗಿ ಮಂಗಳಾಶಾಸನ ಗೈಯುತ್ತ ನಿನ್ನ ಸೇವಾಕಾಂಕ್ಷಿಗಳಾಗಿ ಆಲಯದ ಸುವರ್ಣ ದ್ವಾರದಲ್ಲಿ ನಿಂತಿರುವರು. ಓ ! ಶ್ರೀನಿವಾಸ ನಿನಗೆ ಸುಪ್ರಭಾತವು.

**ಬ್ರಹ್ಮಾದಯ ಸ್ಸುರವರಾಸ್ಸ ಮಹರ್ಷಯಸ್ತೇ**
**ಸಂತಸ್ಸನಂದನ ಮುಖಾಸ್ತ್ವಥ ಯೋಗಿವರ್ಯಾಃ ।**
**ಧಾಮಾಂತಿಕೇ ತವ ಹಿ ಮಂಗಳವಸ್ತುಹಸ್ತಾಃ**
**ಶ್ರೀ ವೇಂಕಟಾಚಲಪತೇ ತವ ಸುಪ್ರಭಾತಮ್ ॥ ೧೮ ॥**

ಬ್ರಹ್ಮನೇ ಮೊದಲಾದ ದೇವಶ್ರೇಷ್ಠರೂ, ಪ್ರಸಿದ್ಧರಾದ ಮಹರ್ಷಿಗಳೂ, ಸನಕಸನಂದನಾದಿ ಯೋಗಿಗಳು ನಿನ್ನ ಆಲಯದ ಸಮೀಪದಲ್ಲಿ ಮಂಗಳ ದ್ರವ್ಯಗಳನ್ನು ತಂದು ನಿನ್ನ ಸೇವಾಕಾಂಕ್ಷಿಗಳಾಗಿ ನಿಂತಿರುವರು. ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

**ಲಕ್ಷ್ಮೀನಿವಾಸ ನಿರವದ್ಯ ಗುಣೈಕಸಿಂಧೋ**
**ಸಂಸಾರ ಸಾಗರಸಮುತ್ತರಣೈಕಸೇತೋ ।**
**ವೇದಾಂತವೇದ್ಯ ನಿಜವೈಭವ ಭಕ್ತಭೋಗ್ಯ**
**ಶ್ರೀ ವೇಂಕಟಾಚಲಪತೇ! ತವ ಸುಪ್ರಭಾತಮ್ ॥ ೧೯ ॥**

ಲಕ್ಷ್ಮಿಗೆ ನಿತ್ಯವಾಸಸ್ಥಾನವಾಗಿಯೂ, ನಿತ್ಯವೂ ನಿರ್ದಿಷ್ಟವೂ ಆದ ಸಮಸ್ತ ಕಲ್ಯಾಣಗುಣಗಳಿಗೆ ಆಕರನೂ, ಪ್ರಪಂಚವೆಂಬ ಮಹಾಸಾಗರವನ್ನು ದಾಟುವುದರಲ್ಲಿ ಅದ್ವಿತೀಯವಾದ ಸೇತುವೆಯೂ, ವೇದಾಂತಗಳಿಂದ ತಿಳಿಯಲ್ಪಡುವ ವೈಭವವುಳ್ಳವನೂ, ಭಕ್ತರಿಗೆ ಭೋಗ್ಯನೂ ಆಗಿರುವ ಶ್ರೀ ವೇಂಕಟಾಚಲಪತೇ! ನಿನಗೆ ಸುಪ್ರಭಾತವು.

**ಇತ್ಥಂ ವೃಷಾಚಲಪತೇರಿಹ ಸುಪ್ರಭಾತಂ**
**ಯೇ ಮಾನವಾಃ ಪ್ರತಿದಿನಂ ಪಠಿತುಂ ಪ್ರವೃತ್ತಾಃ ।**
**ತೇಷಾಂ ಪ್ರಭಾತಸಮಯೇ ಸ್ಮೃತಿರಂಗಭಾಜಾಂ**
**ಪ್ರಜ್ಞಾಂ ಪರಾರ್ಥ ಸುಲಭಾಂ ಪರಮಾಂ ಪ್ರಸೂತೇ ॥ ೨೯ ॥**

ಶ್ರೀ ವೇಂಕಟಾಚಲಾಧೀಶನ ಇಂತಹ ಸುಪ್ರಭಾತ ಸ್ತೋತ್ರವನ್ನು ನೆನಪಿನಲ್ಲಿಟ್ಟುಕೊಂಡು ಪ್ರತಿದಿನವೂ ಬೆಳಗಿನ ಕಾಲದಲ್ಲಿ ಯಾರು ಪಠಿಸುವ ಅಭ್ಯಾಸವಿಟ್ಟುಕೊಳ್ಳುವರೋ ಅವರಿಗೆ ಶ್ರೀ ವೇಂಕಟೇಶನು ಪರಮ ಪವಿತ್ರವೂ, ಪರವಿದ್ಯೆ (ವೇದಾಂತವಿದ್ಯೆ)ಯ ಅರ್ಥವನ್ನು ತಿಳಿಸುವುದರಲ್ಲಿ ಸುಲಭವೂ, ಆದ ಪ್ರಜ್ಞೆಯನ್ನು ಅತಿಶಯವಾಗಿ ಕರುಣಿಸುತ್ತಾನೆ.

**ಇಂತು ಶ್ರೀ ವೇಂಕಟೇಶ ಸುಪ್ರಭಾತವು ಮುಗಿಯಿತು.**



॥ ಶ್ರೀಃ ॥

ಶ್ರೀ ಶ್ರಿಯೈ ನಮಃ

# ಶ್ರೀ ವೇಂಕಟೇಶ ಸ್ತೋತ್ರಮ್

**ಕಮಲಾಕುಚಚೂಚುಕಕುಂಕುಮತೋ**
**ನಿಯತಾರುಣಿತಾತುಲನೀಲತನೋ ।**
**ಕಮಲಾಯತಲೋಚನ ಲೋಕಪತೇ**
**ವಿಜಯೀ ಭವ ವೇಂಕಟಶೈಲಪತೇ ॥ ೧ ॥**

ಯಾವ ಶ್ರೀದೇವಿಯ ಚಿಪ್ನದಿಂದ ಪರಾತ್ಪರವಾದ ತತ್ತ್ವವನ್ನು ನಿರ್ಣಯಿಸಲು ತಾತ್ತ್ವಿಕರು ಸಮರ್ಥರಾಗುವರೋ, ಆ ದೇವಿಯ ವಕ್ಷ ಪ್ರದೇಶದ ಅಂಗರಾಗದಿಂದ ಅನವರತವೂ ಅರುಣವರ್ಣದಿಂದ ಶೋಭಿಸುವ ನೀಲ ಮೇಘದಂತಹ ಶರೀರದವನೂ, ಕಮಲದಳದಂತಹ ವಿಶಾಲ ನೇತ್ರದವನೂ, ಸಮಸ್ತ ಲೋಕಗಳ ಅಧಿಪತಿಯೂ ಆದ ಶ್ರೀ ವೇಂಕಟೇಶ! ನೀನು ಸರ್ವೋತ್ಕೃಷ್ಟನಾಗಿರು! ಪುರುಷೋತ್ತಮನಾಗಿರು.

**ಸಚತುರ್ಮುಖ ಷಣ್ಮುಖ ಪಂಚಮುಖ-**
**ಪ್ರಮುಖಾಖಿಲದೈವತಮೌಳಿಮಣೇ ।**
**ಶರಣಾಗತವತ್ಸಲ ಸಾರನಿಧೇ**
**ಪರಿಪಾಲಯ ಮಾಂ ವೃಷಶೈಲಪತೇ ॥ ೨ ॥**

ಚತುರ್ಮುಖನಾದ ಬ್ರಹ್ಮ, ಆರು ಮುಖಗಳುಳ್ಳ ಕುಮಾರಸ್ವಾಮಿ, ಐದು ಮುಖಗಳುಳ್ಳ ಈಶ್ವರನೇ ಮೊದಲಾದ ಸಮಸ್ತ ದೇವತೆಗಳಿಗೂ ಶಿರೋಮಣಿಯಾಗಿಯೂ, ಶರಣಾಗತರಾದವರಲ್ಲಿ ವಾತ್ಸಲ್ಯವುಳ್ಳವನಾಗಿಯೂ ಶೌರ್ಯನಿಧಿಯೂಗಿಯೂ ಇರುವ ವೃಷಶೈಲಪತಿಯಾದ ವೇಂಕಟೇಶ! ನನ್ನನ್ನು ಪರಿಪಾಲಿಸು. ವೃಷಶೈಲಾಧಿಪನಾದ ಶ್ರೀ ವೇಂಕಟೇಶನನ್ನು 'ಶರಣಾಗತವತ್ಸಲ ಸಾರನಿಧೇ' - ಎಂದು ಪರಿಪಾಲನ ಮಾಡುವ ವಿಷಯದಲ್ಲಿ ಸಂಬೋಧಿಸಿರುವುದು ಮೇಲಿನ ವಾತ್ಸಲ್ಯ ಮತ್ತು ಶೌರ್ಯರೂಪವಾದ ದಿವ್ಯ ಕಲ್ಯಾಣಗುಣ ಪರಿಪೂರ್ಣನಾದವನಿಂದ

ಮಾತ್ರವೇ ಪರಿಪಾಲನವು ಸಾಧ್ಯವೆಂಬುದನ್ನು ಎತ್ತಿ ತೋರಿಸುತ್ತದೆ. ಕೇವಲ ವಾತ್ಸಲ್ಯವಿದ್ದು ಶೌರ್ಯವಿಲ್ಲದಿದ್ದರೆ ಆಶ್ರಿತರನ್ನು - ಭೀತರನ್ನು ಪಾಲಿಸುವುದು ಸಾಧ್ಯವಿಲ್ಲ. ಹಾಗೆಯೇ ಶೌರ್ಯವಿದ್ದು, ವಾತ್ಸಲ್ಯ ವಿಲ್ಲದಿದ್ದರೂ ಪಾಲಿಸಲು ಸಾಧ್ಯವಿಲ್ಲ. ಪರಮಾತ್ಮನು ಈ ಎರಡು ಮಂಗಳಗುಣಗಳಿಂದಲೂ ಕೂಡಿದವನು. ವಾತ್ಸಲ್ಯವೆಂದರೆ ದೋಷ ಯುಕ್ತನಾದವನಲ್ಲಿಯೂ ಇರುವ ಪ್ರೇಮ. ಆಗ ತಾನೇ ಹುಟ್ಟಿರುವ ಕರುವಿನಲ್ಲಿ ತಾಯಿಯಾಗಿರುವ ಗೋವಿಗಿರುವಂತಹ ಪ್ರೇಮ. ಅಂದರೆ, ಆಗತಾನೇ ಹುಟ್ಟಿದ ಕರುವು ತಾಯಿಯು ಹೊಟ್ಟೆಯಿಂದ ಹೊರಗೆ ಬಂದಾಗ ಅನೇಕ ಕಲ್ಮಷಗಳಿಂದ ಕೂಡಿರುತ್ತದೆ. ಆದರೆ ಮಾತೆಯಾದ ಗೋವು ಅದಾವುದನ್ನು ಲಕ್ಷಿಸದೆ - ಅಸಹ್ಯ ಪಟ್ಟುಕೊಳ್ಳದೆ ಭೋಗ್ಯತಾ ಬುದ್ಧಿಯಿಂದ ಆದರ ಶರೀರವನ್ನು ಒಂದೇ ಸಮನಾಗಿ ನೆಕ್ಕಿ ಸ್ವಚ್ಛವಾಗಿ ಕೊಳೆಯಿಲ್ಲದಂತೆ ಮಾಡುತ್ತದೆ. ಇದೇ ವಾತ್ಸಲ್ಯವೆಂದು ಹಿರಿಯರ ಅಭಿ ಪ್ರಾಯ. ಅದರಂತೆಯೇ ದೋಷಯುಕ್ತವಾದ ಜೀವನದಲ್ಲಿಯೂ ಪರಮಾತ್ಮನು ತೋರಿಸುವ ಪ್ರೇಮವು ವಾತ್ಸಲ್ಯವೆನಿಸುತ್ತದೆ. ಇದನ್ನು ನಾವು ಶ್ರೀಮದ್ರಾಮಾಯಣದಲ್ಲಿ ವಿಭೀಷಣನ ಶರಣಾಗತಿಯ ಸಮಯದಲ್ಲಿ ಕಾಣಬಹುದು. ಶತ್ರುವಾದ ರಾವಣನ ತಮ್ಮನಾಗಿದ್ದರೂ ಪ್ರಸನ್ನನಾಗಿ ವಿಭೀಷಣನಿಗೆ ಅಭಯವನ್ನು ನೀಡುತ್ತಾನೆ. ತನ್ನ ಅಶ್ರಿತ ವಾತ್ಸಲ್ಯವನ್ನು ವ್ಯಕ್ತಪಡಿಸುತ್ತಾನೆ.

**ಸಕೃದೇವ ಪ್ರಪನ್ನಾಯ ತವಾಽಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥**
**ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಽಭಯಂ ಮಯಾ ।**
**ವಿಭೀಷಣೋ ವಾ ಸುಗ್ರೀವ ಯದಿ ವಾ ರಾವಣಃ ಸ್ವಯಮ್ ॥**

ಎನ್ನುತ್ತಾನೆ. ಪ್ರಪತ್ತಿಯು ಮಾನಸಿಕವೇ ಆಗಲಿ, ವಾಚಿಕವೇ ಆಗಲಿ ಒಂದೇ ಒಂದು ಸಾರಿಯಾದರೂ ಪ್ರಕಟಿಸಲ್ಪಟ್ಟರೆ, ಅವನಿಗೂ ಅವನ ಸಂಬಂಧಿಕರಿಗೂ - ಯಾರಿಗಾದರೂ ಅಭಯವನ್ನು ಕೊಡುವುದೇ ನನ್ನ ವ್ರತ, ಎಲೈ ಕಪಿಶ್ರೇಷ್ಠ! ಅವನನ್ನು ಕರೆದುಕೊಂಡು ಬಾ; ಅವನು ವಿಭೀ ಷಣನೇ ಆಗಲಿ, ಅಥವಾ ಸ್ವಯಂ ರಾವಣನೇ ಆಗಲಿ, ಅಭಯ ವುಂಟು - ಎನ್ನುವ ವಾತ್ಸಲ್ಯೈಕ ಪರಾಯಣತೆಯೂ ಶೌರ್ಯನಿಧಿತ್ವವೂ, ಜಗದೇಕ ಧನುರ್ಧರನಾದ ಶ್ರೀರಾಮಚಂದ್ರನಲ್ಲಿ ಅಲ್ಲದೆ ಮತ್ತೆಲ್ಲಿಯೂ

ಕಂಡು ಬರಲಾರದು. ಹೀಗೆ ಶ್ರೀ ರಾಮಚಂದ್ರನಿಂದ ಕೊಡಲ್ಪಡುವ ಅಭಯವು ಮೋಕ್ಷವೆನಿಸುವುದು.

**ಅಥ ಸೋಽಭಯಂ ಗತೋ ಭವತಿ, ಆನಂದಂ**
**ಬ್ರಹ್ಮಣೋ ವಿದ್ವಾನ್ ಬಿಭೇತಿ ಕುತಶ್ಚನೇತಿ**

ಎಂಬ ಶ್ರುತಿಯು ಇದೇ ಅರ್ಥವನ್ನು ಪ್ರತಿಪಾದಿಸುತ್ತದೆ. ಆದುದ ರಿಂದ 'ಆಶ್ರಿತವಾತ್ಸಲ್ಯೈಕಜಲಧಿ' ಯಾದ ಶ್ರೀ ವೇಂಕಟೇಶ! ನನ್ನನ್ನು ಪರಿಪಾಲಿಸು - ಎಂದು ಪ್ರಾರ್ಥಿಸಿರುವುದು ಅತ್ಯಂತ ರಮ ಣೀಯವಾಗಿದೆ.

**ಅತಿವೇಲತಯಾ ತವ ದುರ್ವಿಷಹೈ -**
**ರನುವೇಲಕೃತೈರಪರಾಧಶತೈಃ ।**
**ಭರಿತಂ ತ್ವರಿತಂ ವೃಷಶೈಲಪತೇ**
**ಪರಯಾ ಕೃಪಯಾ ಪರಿಪಾಹಿ ಹರೇ ॥ ೩ ॥**

ನಾನು ಮಾಡಿರುವ ಅಪರಾಧಗಳು ಗಣನಾತೀತವಾದವು. ಆದುದ ರಿಂದಲೇ ನಿನ್ನಿಂದ ಸಹಿಸಲೂ ಕಷ್ಟವಾದವು. ಅಂತಹ ಅಪರಾಧಗಳಿಂದ ತುಂಬಿಕೊಂಡಿರುವ ನನ್ನನ್ನು ಹೇ ವೃಷಾಚಲಪತೇ, ಹರೇ! ಕಾಲ ವಿಳಂಬ ಮಾಡದೆ ಪರಮ ಕರುಣೆಯಿಂದ ಕಾಪಾಡು.

**ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।**
**ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ॥**

- ಎಂದರೆ, ತಿಳಿಯದೆ ಮುಟ್ಟಿದರೂ ಬೆಂಕಿಯು ಹೇಗೆ ಕೈಯನ್ನು ಸುಡುವುದೋ ಹಾಗೆಯೇ ಪಾಪಾತ್ಮರಾದ ನಾವು ಇಷ್ಟವಿಲ್ಲದೆಯೇ ಹರಿಯನ್ನು ಸ್ಮರಿಸಿದರೂ ಅವನು ಪಾಪಗಳನ್ನು ಪರಿಹರಿಸುತ್ತಾನೆ - ಎಂದ ಮೇಲೆ ಪಾಪಯುಕ್ತನಾದರೂ ಪಶ್ಚಾತ್ತಾಪತಪ್ತನಾಗಿ, ದೋಷ ದೂರನಾದ ಪರಮಾತ್ಮನನ್ನು ಆಶ್ರಯಿಸಿದರೆ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲ. ಏಕೆಂದರೆ, ಪಾಪ ಮಾಡುವುದು ಜೀವನ ಸ್ವಭಾವ ಹೇಗೋ, ಹಾಗೆಯೇ ಪಾಪಗಳನ್ನು ಪರಿಹರಿಸುವುದೂ ಅವ್ಯಾಜ ಕರುಣಾ ಮೂರ್ತಿಯಾದ ಪರಮಾತ್ಮನ ಸ್ವಭಾವ. 'ತ್ವರಿತಂ'- ಎಂದರೆ 'ಬೇಗ' ನನ್ನನ್ನು ಕಾಪಾಡು - ಎನ್ನುವುದರಿಂದ ಪ್ರಪನ್ನನು ಆರ್ತನೆಂದು ವ್ಯಕ್ತ

ವಾಗುತ್ತದೆ. ಆರ್ತನೆಂದರೆ ಆಶ್ರಯವನ್ನು ಪಡೆಯುವುದರಲ್ಲಿ ಕಾಲ ವಿಳಂಬವನ್ನು ಸಹಿಸಲಾರದವನು ಎಂದರ್ಥ. ಪರಮಾತ್ಮನಾದರೋ ಆರ್ತತ್ರಾಣ ಪರಾಯಣನು. ಆದುದರಿಂದಲೇ ಕರಿರಾಜನ ಆರ್ತಧ್ವನಿಯನ್ನು ಕೇಳಿದೊಡನೆಯೇ ಹೇಗೆ ಓಡಿ ಬಂದು ಕಾಪಾಡಿದೆಯೋ ಅಂತಹ ಅವ್ಯಾಜ ಕರುಣೆಯಿಂದ ನನ್ನನ್ನೂ ಕಾಪಾಡು. ನನಗಿಂತಲೂ ಆರ್ತರು ಮತ್ತೊಬ್ಬರಿಲ್ಲ; ನಿನಗಿಂತಲೂ ಆರ್ತತ್ರಾಣ ಪರಾಯಣರು ಮತ್ತೊಬ್ಬರಿಲ್ಲವೆಂಬುದೂ ಇದರ ಅಭಿಪ್ರಾಯ.

**ಅಧಿವೇಂಕಟಶೈಲಮುದಾರಮತೇ -**
**ರ್ಜನತಾಭಿಮತಾಧಿಕದಾನರತಾತ್ ।**
**ಪರದೇವತಯಾ ಗದಿತಾನ್ನಿಗಮೈಃ**
**ಕಮಲಾದಯಿತಾನ್ನ ಪರಂ ಕಲಯೇ ॥ ೪ ॥**

ಶ್ರೀ ವೇಂಕಟಾಚಲದಲ್ಲಿ ವಾಸರಸಿಕನಾಗಿ, ಪರಮೌದಾರ್ಯದಿಂದ ಕೂಡಿ ಜನತೆಯ ಅಭಿಮತಕ್ಕಿಂತಲೂ ಅಧಿಕವಾಗಿ ದಾನಶೀಲನಾಗಿರುವ, ಶ್ರುತಿಗಳಿಂದ ಪರದೇವತೆ ಎಂದು ಹೇಳಲ್ಪಟ್ಟಿರುವ ಶ್ರಿಯಃಪತಿಯಾದ ಶ್ರೀಮನ್ನಾರಾಯಣನನ್ನು ಬಿಟ್ಟು ಮತ್ತೆ ಯಾರನ್ನೂ ಆಶ್ರಯಿಸುವುದಿಲ್ಲ. ಶ್ರೀವೆಂಕಟೇಶ್ವರ ಸ್ವರೂಪದಿಂದಿರುವ ಶ್ರೀಮನ್ನಾರಾಯಣನೇ ನನಗೆ ಆಶ್ರಯವೆಂದು ಇದರ ಅರ್ಥ.

**ಮಾಯಾವೀ ಪರಮಾನಂದಂ ತ್ಯಕ್ತ್ವಾ ವೈಕುಂಠ ಮುತಮಮ್ ।**
**ಸ್ವಾಮಿಪುಷ್ಕರಿಣೀತೀರೇ ರಮಯಾ ಸಹ ಮೋದತೇ ॥**

ಎಂದರೆ, ಮಾಯೆಯನ್ನು ಸೃಜಿಸುವ ನಾರಾಯಣನು ಪರಮಾನಂದಕರವಾದ ವೈಕುಂಠವನ್ನೂ ಬಿಟ್ಟು ರಮಾದೇವಿಯೊಡನೆ ಸ್ವಾಮಿಪುಷ್ಕರಿಣೀ ತೀರದಲ್ಲಿ ವಿಹರಿಸುತ್ತಿರುವನು. ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಕಾರಣದಿಂದಲೇ ಆತನು ವೇಂಕಟಾಚಲದಲ್ಲಿ ನೆಲೆಸಿರುವನು. ಪುತ್ರಕಳತ್ರ ರಾಜ್ಯಾದಿ ಪ್ರಾಪ್ತಿಗಳು ಆವನ ಔದಾರ್ಯವನ್ನು ತೋರಿಸುವ ಮಹಿಮಾ ವಿಶೇಷಗಳು. ಗುರುಹಿರಿಯರೂ, ರಾಜ ಮಹಾರಾಜರೂ, ವೀರಾಧಿವೀರರೂ, ಶಾಸ್ತ್ರ ಪರಿಣತರೂ, ವ್ಯವಹಾರ ಚತುರರೂ ಸೇರಿರುವ ಮಹಾಸಭೆಯಲ್ಲಿ ವೀರರಾದರೂ ಧರ್ಮಪಾಶಕ್ಕೆ ಕಟ್ಟು ಬಿದ್ದು, ಅಸಹಾಯಕರಾಗಿರುವ ಯುಧಿಷ್ಠಿರನೇ ಮೊದಲಾದ

ಐವರು ಪತಿಗಳಿದ್ದರೂ ಅನಾಥೆಯಂತಿರುವ, ರಜಸ್ವಲೆಯಾದ ಪಾಂಚಾಲಿಯ ಮೊರೆಯನ್ನು ಕೇಳಿದವರಾರು? ಪರಮೋದಾರನಾದ ಪುಂಡರೀಕಾಕ್ಷನಾದ ಗೋವಿಂದನಲ್ಲದೆ ಮತ್ತೆ ಯಾರೂ ಅವಳನ್ನು ರಕ್ಷಿಸಲಿಲ್ಲ, ಅವನ ಔದಾರ್ಯವನ್ನು ಎಷ್ಟೆಂದು ಹೇಳೋಣ! ಇದು ಅವನ ಔದಾರ್ಯಕ್ಕೆ ಒಂದು ನಿದರ್ಶನವಾಯಿತು. 'ನಿಗಮ ಗದಿತ' ವೆನ್ನುವುದರಿಂದ - 'ತ್ವಮೀಶ್ವರಾಣಾಂ ಪರಮಂ ಮಹೇಶ್ವರಂ ತ್ವಂ ದೇವತಾನಾಂ ಪರಮಂ ಚ ದೈವತಮ್', 'ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿ ಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ ಬ್ರಹ್ಮೇತಿ' - 'ಸದೇವ ಸೋಮ್ಯೇದಮಗ್ರ ಆಸೀತ್', 'ಏಕಮೇವಾದ್ವಿತೀಯಂ ಬ್ರಹ್ಮ', 'ಯಸ್ಸರ್ವಜ್ಞಸ್ಸರ್ವವಿತ್', 'ಪರಾಽಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ', 'ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ', 'ಏಷ ಸರ್ವಭೂತಾಂತರಾತ್ಮ ಅಪಹತಪಾಪ್ಮಾದಿವ್ಯೋ ದೇವ ಏಕೋ ನಾರಾಯಣಃ'- ಇತ್ಯಾದಿ ನೂರಾರು ಶ್ರುತಿಗಳಿಂದ ಉದ್ಘೋಷಿಸಲ್ಪಟ್ಟ ವೈಶಿಷ್ಟ್ಯವುಳ್ಳವನೆಂದು ವ್ಯಕ್ತವಾಗುತ್ತದೆ.

**ಕಲವೇಣುರವಾವಶಗೋಪವಧೂ-**
**ಶತಕೋಟಿವೃತಾತ್ ಸ್ಮರಕೋಟಿಸಮಾತ್ ।**
**ಪ್ರತಿವಲ್ಲವಿಕಾಭಿಮತಾತ್ಸುಖದಾತ್**
**ವಸುದೇವಸುತಾನ್ನ ಪರಂ ಕಲಯೇ ॥ ೫ ॥**

ಅವ್ಯಕ್ತ ಮಧುರವಾದ ಕೊಳಲಿನ ಮಧುರವಾದ ಧ್ವನಿಯಿಂದಲೇ ವಶೀಭೂತರಾದ ಅಪರಿಮಿತ ಗೋಪವನಿತೆಯರಿಂದ ಸುತ್ತವರಿಯಲ್ಪಟ್ಟವನು, ಕೋಟಿ ಮನ್ಮಥರ ಲಾವಣ್ಯವುಳ್ಳವನು, ಪ್ರತಿ ಗೋಪಿಯರಿಗೂ ಅಭಿಮತನಾಗಿಯೂ, ಎಲ್ಲರಿಗೂ ಸುಖವನ್ನು ಕೊಡುವವನಾಗಿಯೂ ಇರುವ ವಸುದೇವ ಸುತನಾದ ಶ್ರೀಕೃಷ್ಣನಲ್ಲದೆ ನಾನು ಮತ್ತೆ ಯಾರನ್ನೂ ಧ್ಯಾನಿಸುವುದಿಲ್ಲ. ಈ ಪದ್ಯದಲ್ಲಿ ಪರವಾಸುದೇವನ ಸೌಲಭ್ಯ ಗುಣವು ಅತ್ಯಂತ ಮನೋಹರವಾಗಿ ವರ್ಣಿತವಾಗಿದೆ. ತ್ರೇತಾಯುಗದಲ್ಲಿ ಶ್ರೀರಾಮಚಂದ್ರನಾಗಿ ಅವತರಿಸಿ, ದಶರಥನ ಮನೋರಥವನ್ನು ಈಡೇರಿಸಿ, ರಾಕ್ಷಸಬಾಧೆಯಿಂದ ಪೀಡಿತರಾದ ತಪೋಧನರನ್ನು ರಕ್ಷಿಸುವ ಉದ್ದೇಶದಿಂದ ದಂಡಕಾರಣ್ಯಕ್ಕೆ ಹೋಗುವವನು. ಖರ ದೂಷಣಾದಿ

ರಾಕ್ಷಸ ಸಮೂಹವನ್ನು ವಧಿಸಿ ಬಂದ ಅಪ್ರತಿಮಶೂರನೂ, ಪರಮ ಸುಂದರನೂ ಆದ ಶ್ರೀರಾಮನನ್ನು ನೋಡಿ ಅವನ ಮನೋಹರ ರೂಪವನ್ನು ನೋಡಿ, ತಪೋಧನರು ಆತನ ಆಲಿಂಗನದ ಸುಖವನ್ನು ಬಯಸಿದರಂತೆ. 'ಪುಂಸಾಂ ಮೋಹನರೂಪ'- ನಾದ ಅವನ ಆ ದಿವ್ಯ ರೂಪವು ಅವರನ್ನು ತಲ್ಲಣಗೊಳಿಸಿತಂತೆ. ಅದರ ಫಲವಾಗಿ ದ್ವಾಪರ ಯುಗದಲ್ಲಿ ಆ ತಪೋಧನರೆಲ್ಲರೂ ಗೋಪವನಿತೆಯರಾಗಿ ಜನಿಸಿ, ಮೋಹನಾಕಾರನಾದ ವಸುದೇವಸುತನಾದ ಶ್ರೀಕೃಷ್ಣನನ್ನು ಪಡೆದು ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಂಡರಂತೆ. ಇದೊಂದು ಐತಿಹ್ಯದಿಂದ ಗೀತೆಯಲ್ಲಿ ಹೇಳಿರುವಂತೆ-

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥**

-ಎಂದರೆ, ಆರ್ತನೂ, ಜಿಜ್ಞಾಸುವೂ, ಅರ್ಥಾರ್ಥಿಯು ಮತ್ತು ಜ್ಞಾನಿಯೂ ನನ್ನನ್ನು ಆಶ್ರಯಿಸುತ್ತಾರೆ; ಅವರಲ್ಲಿ ಪರಮಭಕ್ತಿಯುಳ್ಳ ಜ್ಞಾನಿಯೇ ಸರ್ವಶ್ರೇಷ್ಠನು. ವಾಸುದೇವನೇ ಸರ್ವಸ್ವವೆಂದು ನಂಬಿ ಆಶ್ರಯಿಸುವ ಮಹಾತ್ಮನು ದುರ್ಲಭ; ಅಂತಹ ಜ್ಞಾನಿಯೂ ಅನೇಕ ಜನ್ಮಗಳನ್ನು ಕಳೆದು ಕೊನೆಗೆ ನನ್ನಲ್ಲಿ ಪ್ರಪನ್ನನಾಗುತ್ತಾನೆ-ಎಂದು ತಿಳಿಸಿರುವಂತೆ ಆ ತಪೋಧನರು ಜನ್ಮಾಂತರ ಸುಕೃತಿ ವಿಶೇಷದಿಂದ ಗೋಪವನಿತೆಯರಾಗಿ ಜನಿಸಿ, ಶುದ್ಧ ಪ್ರೇಮದಿಂದ ವಾಸುದೇವನೇ ಸರ್ವಸ್ವವೆಂದು ನಂಬಿ ಮುಕ್ತರಾದರು.

ಹಿಂದಿನ ಯುಗದಲ್ಲಿ ದಶರಥನ ಇಷ್ಟಾರ್ಥವನ್ನು ನೆರವೇರಿಸಿದಂತೆ ದ್ವಾಪರ ಯುಗದಲ್ಲಿಯೂ ವಸುದೇವ ದೇವಕಿಯರ ಮನೋರಥವನ್ನು ಸಲ್ಲಿಸಲು ಅವರ ಪುತ್ರನಾಗಿ ಅವತರಿಸಿ, ತನ್ನ ಸೌಲಭ್ಯವನ್ನು ಪ್ರದರ್ಶಿಸಿದನು. 'ವಿಶ್ವರೂಪ'ನಾಗಿ ಪ್ರತಿ ಗೋಪಿಗೂಅಭಿಮತನಾದನು; ಶಾಶ್ವತ 'ಸುಖ'ವನ್ನು ಕರುಣಿಸಿ, ಅನನ್ಯ ಶರಣನಾದನು. ಅದುದ ರಿಂದಲೇ- 'ಏಕೋ ದೇವೋ ದೇವಕೀಪುತ್ರ ಏವ' ಎಂದು ಭಜಿಸು ವವರಿಗೆ ಏಕಮಾತ್ರನಾದ ಆಶ್ರಯವಾದನು. ಆದ್ದರಿಂದ ಅಂತಹ ವಸು ದೇವಸುತನನ್ನು ಬಿಟ್ಟು ನಾನು ಯಾರನ್ನೂ ಭಜಿಸುವುದಿಲ್ಲವೆಂಬುದು ರಮಣೀಯವಾದುದು-

**ಅಭಿರಾಮಗುಣಾಕರ ದಾಶರಥೇ**
**ಜಗದೇಕಧನುರ್ಧರ ಧೀರಮತೇ ।**
**ರಘುನಾಯಕ ರಾಮ ರಮೇಶ ವಿಭೋ**
**ವರದೋ ಭವ ದೇವ ದಯಾಜಲಧೇ ॥ ೬ ॥**

ಹಿಂದಿನ ಪದ್ಯದಲ್ಲಿ ಶ್ರೀವೇಂಕಟೇಶ್ವರನನ್ನು ಶ್ರೀಕೃಷ್ಣಾವತಾರದ ಮಹಿಮೆಯಿಂದ ಸ್ತುತಿಸಿದ ಕವಿ, ಇಲ್ಲಿಂದ ಮುಂದೆ ಮೂರು ಪದ್ಯಗಳಿಂದ ಶ್ರೀರಾಮಾವತಾರದ ಗುಣಗಳನ್ನು ವರ್ಣಿಸುತ್ತಾನೆ. 'ದಶರಥ ಪುತ್ರನಾಗಿಯೂ, ಸಕಲ ಕಲ್ಯಾಣ ಗುಣಗಳಿಗೂ ಆಕರನಾಗಿಯೂ, ಸಮಸ್ತ ಪ್ರಪಂಚದಲ್ಲೆಲ್ಲ ಏಕಮಾತ್ರ ಧನುರ್ಧಾರಿಯಾಗಿಯೂ, ಲೋಕೈಕ ವೀರನಾಗಿಯೂ, ರಘುವಂಶವೆಂಬ ಮಾಲೆಯಲ್ಲಿ ನಾಯಕಮಣಿಯಾಗಿಯೂ, 'ರಾಮ'-ಎಂಬ ಜಗನ್ಮಂಗಳ ನಾಮಧೇಯವುಳ್ಳವನಾಗಿಯೂ, ಶ್ರಿಯಃಪತಿಯಾಗಿಯೂ, ಕರುಣಾಸಮುದ್ರನಾಗಿಯೂ ಇರುವ ದೇವ ದೇವ! ಪ್ರಸನ್ನನಾಗು'. ಪರಮಾತ್ಮನ ಅನಂತವಾದ ಅವತಾರಗಳಲ್ಲಿ ಶ್ರೀರಾಮಾವತಾರವು ಅಮೋಘವೂ, ಪರಿಪೂರ್ಣವೂ, ಆದರ್ಶವೂ ಆದುದು. ಶ್ರೀರಾಮನು ಅಭಿರಾಮ ಗುಣಾಕರನು. ಆತನ ಕಲ್ಯಾಣ ಗುಣಗಳನ್ನು ವರ್ಣಿಸಲು ಸಮರ್ಥನಾದ ವಾಲ್ಮೀಕಿಯೇ ಧನ್ಯನು. ಮೊದಲಿನಿಂದ ಕೊನೆಯವರೆಗೂ ಶ್ರೀಮದ್ರಾಮಾಯಣದಲ್ಲಿರಾಮನ ಮಂಗಳ ಗುಣಗಳನ್ನು ಕಾಣಬಹುದು. ವಿಸ್ತೃತವಾಗುವುದೆಂಬ ಭಯದಿಂದ ಇಲ್ಲಿ ಒಂದೆರಡು ಉದಾಹರಣೆಗಳಿಂದ ಮಾತ್ರ ಆದರ್ಶವಾದ ಗುಣಗಳನ್ನು ತೋರಿಸುವ ಪ್ರಯತ್ನ ಮಾಡಲಾಗಿದೆ. ಆಚಾರ್ಯರೊಬ್ಬರು ಹೇಳಿರುವಂತೆ ಶ್ರೀರಾಮನ ವಿಜಯಕ್ಕೆ ಕಾರಣ ಆತನ ಸತ್ಯನಿಷ್ಠೆ ಮತ್ತು ದಾನಶೀಲತೆ. ಆಚಾರ್ಯರು ಇದನ್ನೇ ಪ್ರತಿಪಾದಿಸುತ್ತ-

**ಸತ್ಯೇನ ಲೋಕಾನ್ ಜಯತಿ ದೀನಾನ್ ದಾನೇನ ರಾಘವಃ ।**
**ಗುರೂನ್ ಶುಶ್ರೂಷಯಾ ವೀರೋಧನುಷಾ ಯುಧಿ ಶಾತ್ರವಾನ್ ॥**

ಎಂದರು. ಶ್ರೀರಾಮನು ಮನುಷ್ಯರ ಮಧ್ಯದಲ್ಲಿ ಮನುಷ್ಯನಾಗಿ ಹುಟ್ಟಿದ್ದರೂ, ತನ್ನನ್ನು ತಾನು 'ಆತ್ಮಾನಂ ಮಾನುಷಂ ಮನ್ಯೇ'-ಎಂದು ಹೇಳಿಕೊಂಡಿದ್ದರೂ, 'ರಾಮೋ ದ್ವಿರ್ನಾಭಿಭಾಷತೇ'-ಎಂದು ತಾನೇ ಹೇಳಿಕೊಂಡಿರುವಂತೆ ತನ್ನ ಸತ್ಯನಿಷ್ಠೆಯಿಂದ ಲೋಕಗಳನ್ನು ಗೆಲ್ಲುತ್ತಾನೆ. ಸತ್ಯಸ್ವರೂಪಿಯಾದ ಪರಮಾತ್ಮನ ದಿವ್ಯವೂ, ಮಂಗಳಕರವೂ ಆದ ಗುಣವಿದು. ಆತನ ದಾನಶೀಲತೆಗೆ ಒಂದೇ ಒಂದು ಘಟನೆಯನ್ನು ವಿವರಿಸಿದರೆ ಸಾಕೆಂದು

ತೋರುತ್ತದೆ. ಶ್ರೀರಾಮನು ಪಿತೃವಾಕ್ಯ ಪರಿಪಾಲನೆಗಾಗಿ ಕಾಡಿಗೆ ಹೊರಡುವುದಕ್ಕೆ ಮೊದಲು ಅನೇಕ ದಾನಗಳನ್ನು ಮಾಡುತ್ತಾನೆ. ಅವುಗಳಲ್ಲಿ ಗೋದಾನವೂ ಒಂದು. ಗಾಳಿಯು ಸ್ವಲ್ಪ ಬೀಸಿದರೂ ಎಲ್ಲಿ ತೂರಿ ಹೋಗುವನೋ ಎಂಬಂತಿರುವ ಜೀರ್ಣಕಾಯನಾದ ದ್ವಿಜನೊಬ್ಬನು ರಾಮನನ್ನು ನೋಡಲು ಬರುತ್ತಾನೆ. ರಾಮನು ಆತನನ್ನು ನೋಡಿ 'ಅಯ್ಯಾ ವಿಪ್ರಶ್ರೇಷ್ಠಾ! ನಿನ್ನ ಕೈಯಲ್ಲಿರುವ ಕೋಲನ್ನು ನಿನ್ನ ಶಕ್ತಿಯೆಲ್ಲವನ್ನೂ ಉಪಯೋಗಿಸಿ ದೂರಕ್ಕೆ ಎಸೆ. ಇದೋ ಅಲಂಕೃತವಾದ ಗೋವುಗಳು ಸಾಲಾಗಿ ನಿಂತಿವೆ. ಈ ಸಾಲುಗಳಲ್ಲಿ ನಿನ್ನ ಕೋಲು ಎಲ್ಲಿಯವರೆಗೆ ಹೋಗುವುದೋ ಆ ಗೋವುಗಳೆಲ್ಲ ನಿನ್ನವು' -ಎನ್ನುತ್ತಾನೆ. ಈ ದಾನದ ವೈಖರಿಯನ್ನು ನೋಡಿ! ಎಷ್ಟು ಮನೋಹರವಾಗಿದೆ! ಇದಕ್ಕಿಂತಲೂ ಉತ್ತಮವಾದ ದಾನದ ನಿದರ್ಶನಗಳಿದ್ದರೂ ಇದರಲ್ಲಿ ಮತ್ತೊಂದು ವಿಶೇಷವಿದೆ. ದಾನಶೀಲತೆಯು ಮಾತ್ರವಲ್ಲದೆ ಕಾಡಿಗೆ ಹೋಗಬೇಕಾದ ಪ್ರಸಂಗ ಒದಗಿದರೂ ಆತನ ಮನಸ್ಸಿನಲ್ಲಿ ಸ್ಥೈರ್ಯ, ಪ್ರಸನ್ನತೆ, ಪರಿಹಾಸಶೀಲತೆ, ಯೋಚನೆಯಿಂದ ಕೂಡಿರುವ ಗಾಂಭೀರ್ಯವೇ ಮೊದಲಾದ ಸುಂದರವಾದ ಗುಣಗಳು ಕಂಡು ಬರುತ್ತವೆ. ಆದರಿಂದಲೇ ಶ್ರೀರಾಮನು 'ಅಭಿರಾಮ ಗುಣಾಕರ', ಧೀರಮತಿ; ಧೈರ್ಯವೆಂದರೆ ಎಂತಹ ಕಠೋರ ಸ್ಥಿತಿಯಲ್ಲಿಯೂ ತನ್ನ ಧರ್ಮವನ್ನು ಬಿಡದಿರುವಿಕೆ. ಅದನ್ನು ಶ್ರೀರಾಮನ ಚರಿತ್ರೆಯಲ್ಲಿ ನಾವು ಹೆಜ್ಜೆ ಹೆಜ್ಜೆಗೂ ಕಾಣಬಹುದು. 'ರಾಮ'-ಎಂಬ ಹೆಸರಂತೂ ಅತ್ಯಂತ ಅಭಿರಾಮವಾದುದು. 'ರಮನ್ತೇ ಯೋಗಿನಃ ಅಸ್ಮಿನ್ನಿತಿ ರಾಮಃ'- ಎಂದರೆ ಯಾವನನ್ನು ತಾರಕ ಬ್ರಹ್ಮನನ್ನಾಗಿ ತಿಳಿದು ಯೋಗಿಗಳು ಆತ್ಮಾರಾಮರಾಗಿ, ಯಾವನಲ್ಲಿ ಮನಸ್ಸನ್ನು ವಿಚಾರಗೊಳಿಸುವರೋ ಅವನೇ ರಾಮನು. ಇದನ್ನೇ ಇನ್ನೂ ಸ್ಪಷ್ಟವಾಗಿ ಹೇಳಿದರೆ 'ರಮಂತೇ ಯೋಗಿನೋಽನಂತೇ ಸತ್ಯಾನಂದೇ ಚಿದಾತ್ಮನಿ'-ಸಚ್ಚಿದಾನಂದಾತ್ಮಕನಾದ ಪರಬ್ರಹ್ಮಸ್ವರೂಪಿಯಾದ ರಾಮನಲ್ಲಿ ಯಾವ ಯೋಗಿಗಳು ವಿಹರಿಸುವರೋ ಅಂತಹ ಜಗನ್ಮಂಗಳಕರನಾದ ಅಭಿಧಾನವುಳ್ಳವನು. ಅಂತಹ ಪರಮ ದಯಾಳುವೂ, ಆಶ್ರಿತ ವತ್ಸಲನೂ ಆದ ರಾಮನು ಅನುಗ್ರಹಿಸುವುದು ಆತನ ಸ್ವಾಭಾವಿಕವಾದ ಗುಣವಲ್ಲವೆ!

**ಅವನೀತನಯಾ ಕಮನೀಯಕರಂ**
**ರಜನೀಕರಚಾರು ಮುಖಾಂಬುರುಹಮ್ ।**
**ರಜನೀಚರರಾಜತಮೋಮಿಹಿರಂ**
**ಮಹನೀಯ ಮಹಂ ರಘುರಾಮಮಯೇ ॥ ೭ ॥**

ಹಿಂದಿನ ಪದ್ಯದಲ್ಲಿ ಶ್ರೀರಾಮನ ಅನನ್ಯ ಸಾಧಾರಣ ಗುಣಗಳನ್ನು ವರ್ಣಿಸಿ, ಈ ಪದ್ಯದಲ್ಲಿಯೂ ಆತನ ಸ್ವರೂಪ ಸ್ವಭಾವ ಗುಣಗಳನ್ನು ಚಿತ್ರಿಸಿ, ಆತನನ್ನೇ ರಕ್ಷಕನನ್ನಾಗಿ ಭಾವಿಸುತ್ತಾರೆ-

ಸೀತಾದೇವಿಯ ಸಂಪರ್ಕದಿಂದ ಮನೋಹರನೂ, ಚಂದ್ರನಂತೆ ಆಹ್ಲಾದಕರವಾದ ಮುಖ ಕಮಲವುಳ್ಳವನೂ, ರಾಕ್ಷಸ ರಾಜನೆಂಬ ಅಂಧಕಾರಕ್ಕೆ ಸೂರ್ಯನೂ, ಮಹಾಮಹಿಮನೂ ಆಗಿರುವ ರಘುರಾಮನನ್ನು ರಕ್ಷಕನನ್ನಾಗಿ ಆಶ್ರಯಿಸುತ್ತೇನೆ. ನಾವು ಶ್ರೀರಾಮನನ್ನು ದಶರಥ ಪುತ್ರನೆಂದು ಅಲ್ಲ - ಸಾಕ್ಷಾತ್ ನಾರಾಯಣನೆಂದು ತಿಳಿದಿದ್ದೇವೆ. ಹಾಗೆಯೇ ಅಯೋನಿಜೆಯಾದ ಸೀತಾದೇವಿಯನ್ನೂ ಸಾಕ್ಷಾತ್ ಲಕ್ಷ್ಮೀ ಅಥವಾ ಶ್ರೀದೇವಿ ಎಂದೂ ತಿಳಿದಿದ್ದೇವೆ. ಈ ವಿಚಾರವನು ವಿಷ್ಣು ಪುರಾಣದ ಮೈತ್ರೇಯ ಪರಾಶರ ಸಂವಾದದಲ್ಲಿ, ಶ್ರೀಸ್ತುತಿಯ ಪ್ರಸಂಗದಲ್ಲಿ ಕಾಣಬಹುದು-

**ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ ।**
**ಅನ್ಯೇಷು ಅವತಾರೇಷು ವಿಷ್ಣೋರೇಷಾಽನಪಾಯಿನೀ ।**
**ದೇವತ್ವೇ ದೇವ ದೇಹೇಯಂ ಮನುಷ್ಯತ್ವೇ ಚ ಮಾನುಷೀ**
**ವಿಷ್ಣೋರ್ದೇಹಾನುರೂಪಂ ವೈ ಕರೋತ್ಯೇಷಾತ್ಮನಸ್ತನುಮ್ ॥**

-ಎಂದರೆ, ಶ್ರೀಮನ್ನಾರಾಯಣನು ಜಗತ್ತಿನ ಉದ್ಧಾರಕ್ಕಾಗಿಯೇ ಅನಂತ ನಾಮಧೇಯಗಳಿಂದಲೂ, ಅನಂತರೂಪಗಳಿಂದಲೂ ಅವತರಿಸುತ್ತಿರುವನಷ್ಟೆ; ಅಂತೆಯೇ ಆತನ ನಿತ್ಯ ಸಾನ್ನಿಧ್ಯವುಳ್ಳ ಶ್ರೀದೇವಿಯೂ ಸಹ ಆತನನ್ನು ಅನುಸರಿಸುವಳು. ವಿಷ್ಣುವು ರಾಮನಾಗಿ ಅವತರಿಸಿದಾಗ ಶ್ರೀದೇವಿಯು ಸೀತೆಯಾದಳು; ಕೃಷ್ಣ ಜನ್ಮದಲ್ಲಿ ರುಕ್ಮಿಣಿಯಾದಳು; ಹೀಗೆಯೇ ಇತರ ಅವತಾರಗಳಲ್ಲಿಯೂ ತದನುಸಾರಿಣಿಯಾಗಿರುವುದೇ ಅವಳ ಪ್ರೇಮಪೂರ್ಣವಾದ ಧರ್ಮವಾಗಿದೆ. ಹೆಚ್ಚೇನು! ಅವನು ದೇವತಾಸ್ವರೂಪದಿಂದಿದ್ದರೆ, ಈಕೆಯೂ ದೇವತಾ ಶರೀರದಿಂದಿರುವಳು; ಆತನು ಮಾನುಷರೂಪದಿಂದಿದ್ದರೆ, ಈಕೆಯೂ ಮನುಷ್ಯರೂಪದಿಂದಿರುವಳು-ಹೀಗೆ ಇವರಿಬ್ಬರ ನಿತ್ಯ ಸಾಹಚರ್ಯವು ಪ್ರಸಿದ್ಧವಾದುದು. ಆದುದರಿಂದಲೇ ಶ್ರೀರಾಮ 'ಅವನೀತನಯಾ ಕಮನೀಯಕರನು'. ಇಂತಹ

ನಿತ್ಯಯೋಗವುಳ್ಳ ಜಗನ್ಮಾತಾಪಿತೃಗಳನ್ನೂ, ಅವರ ಸೌಲಭ್ಯ, ಸೌಶೀಲ್ಯ, ವಾತ್ಸಲ್ಯ, ಸ್ವಾಮಿತ್ವವೇ ಮೊದಲಾದ ಗುಣಗಳನ್ನು ಗಮನಿಸಿಯೇ ಭಕ್ತನು 'ರಘುರಾಮಮಯೇ' ಅಂದರೆ ಶ್ರೀರಾಮನನ್ನು ರಕ್ಷಕನಾಗಿ ಆಶ್ರಯಿಸುತ್ತೇನೆ - ಎಂದು ಪ್ರಾರ್ಥಿಸಿರುವುದು ಅಮೋಘವಾದುದು.

**ಸುಮುಖಂ ಸುಹೃದಂ ಸುಲಭಂ ಸುಖದಂ**
**ಸ್ವನುಜಂ ಚ ಸುಕಾಯಮಮೋಘಶರಮ್ ।**
**ಅಪಹಾಯ ರಘೂದ್ವಹ ಮನ್ಯಮಹಂ**
**ನ ಕಥಂಚನ ಕಂಚನ ಜಾತು ಭಜೇ ॥ ೮ ॥**

ಈ ಪದ್ಯದಲ್ಲಿಯೂ ಶ್ರೀರಾಮನನ್ನು ಬಿಟ್ಟರೆ ಮತ್ತೆ ಯಾರೂ ನನಗೆ ರಕ್ಷಕರಿಲ್ಲವೆಂದು ಭಕ್ತನು ಘೋಷಿಸುತ್ತಾನೆ-

ಶ್ರೀರಾಮನು ಸುಂದರಮೂರ್ತಿ; ಸುಮುಖ; ಸರ್ವಲೋಕ ಸುಹೃತ್; ಭಕ್ತರಿಗೆ ಸುಲಭ; ಶಾಶ್ವತ ಸುಖವನ್ನು ನೀಡುವವನು; ಒಳ್ಳೆಯ ಸಹೋದರರುಳ್ಳವನು ಅಥವಾ ಭ್ರಾತೃಪ್ರೇಮದ ಸಜೀವ ಮೂರ್ತಿ; ವ್ಯರ್ಥವಾಗದಂತಹ ಶರಸಂಧಾನವುಳ್ಳವನು. ಇಂತಹ ಆಪದ್ಬಂಧುವೂ, ಅನಾಥ ರಕ್ಷಕನೂ ಆದ ಶ್ರೀರಾಮಚಂದ್ರನನ್ನು ಬಿಟ್ಟು ಮತ್ತೆ ಯಾರನ್ನೂ ಎಂದಿಗೂ ನಾನು ಆಶ್ರಯಿಸುವುದಿಲ್ಲ - ಎನ್ನುವುದರಿಂದ ಭಕ್ತನಿಗೆ ಭಗವಂತನಲ್ಲಿರುವ ನಿಷ್ಠೆಯು ಅಚಂಚಲವಾದುದೆಂದೂ, ಭಕ್ತನಾದವನು ತೈಲಧಾರೆಯಂತಹ ಅವಿಚ್ಛಿನ್ನವಾದ ಭಕ್ತಿಯುಳ್ಳವನಾಗಿರಬೇಕೆಂಬುದೂ ಸುವ್ಯಕ್ತವಾಗುವುದು.

**ವಿನಾ ವೇಂಕಟೇಶಂ ನ ನಾಥೋ ನ ನಾಥಃ**
**ಸದಾ ವೇಂಕಟೇಶಂ ಸ್ಮರಾಮಿ ಸ್ಮರಾಮಿ ।**
**ಹರೇ ವೇಂಕಟೇಶ ಪ್ರಸೀದ ಪ್ರಸೀದ**
**ಪ್ರಿಯಂ ವೇಂಕಟೇಶ ಪ್ರಯಚ್ಛ ಪ್ರಯಚ್ಛ ॥ ೯ ॥**

ಮೇಲಿನ ಪದ್ಯದಲ್ಲಿ ಶ್ರೀರಾಮ, ಶ್ರೀಕೃಷ್ಣನೇ ಮೊದಲಾದ ಅವತಾರಗಳಿಂದ ಸೂಚಿತನಾದ ವೇಂಕಟೇಶನ ದಿವ್ಯ ಗುಣಗಳನ್ನು ಕೊಂಡಾಡಿ, ಈಗ ಸಾಕ್ಷಾತ್ತಾಗಿ ಶ್ರೀವೇಂಕಟೇಶನನ್ನೇ ಭಕ್ತನು ಪ್ರಾರ್ಥಿಸುತ್ತಾನೆ.

ಶ್ರೀವೇಂಕಟೇಶನನ್ನು ಬಿಟ್ಟರೆ ಬೇರೆ ರಕ್ಷಕರಿಲ್ಲ. "ಕಲೌ ವೇಂಕಟ ನಾಯಕಃ"-ಎಂಬಂತೆ ಈ ಕಲಿ ಕಾಲದಲ್ಲಿಯಂತೂ ಶ್ರೀವೇಂಕಟೇಶನೇ ಉತ್ತಾರಕನು. ಆದುದರಿಂದಲೇ ಎಲೈ ವೇಂಕಟೇಶನೇ! ಯಾವಾಗಲೂ ನಿನ್ನನ್ನು ಸ್ಮರಿಸುತ್ತೇನೆ.

**ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಮ್ ।**
**ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥**

- ಈ ಕಲಿ ಕಾಲದಲ್ಲಿ ಹರಿನಾಮವನ್ನು ಬಿಟ್ಟರೆ ನನಗೆ ಬೇರೆ ಗತಿಯೇ ಇಲ್ಲವೆಂದು ಘೋಷಿಸಿರುವಂತೆ ಭಕ್ತನು ಶ್ರೀ ವೇಂಕಟೇಶನ ದಿವ್ಯ ನಾಮ ಸ್ಮರಣವೇ ಪರಮ ಕರ್ತವ್ಯವೆಂದು ತಿಳಿಸುತ್ತಾನೆ. ಹರೇ! ವೇಂಕಟೇಶ! ಪ್ರಸನ್ನನಾಗು, ಪ್ರಸನ್ನನಾಗು; ಓ ವೇಂಕಟೇಶ! ಪ್ರಿಯವಾದುದನ್ನು ಅನು ಗ್ರಹಿಸು.

**ಅಹಂ ದೂರತಸ್ತೇ ಪದಾಂಭೋಜಯುಗ್ಮ-**
**ಪ್ರಣಾಮೇಚ್ಛಯಾಽಽಗತ್ಯ ಸೇವಾಂ ಕರೋಮಿ ।**
**ಸಕೃತ್ಸೇವಯಾ ನಿತ್ಯ ಸೇವಾಫಲಂ ತ್ವಂ**
**ಪ್ರಯಚ್ಛ ಪ್ರಯಚ್ಛ ಪ್ರಭೋ ವೇಂಕಟೇಶ ॥ ೧೦ ॥**

ವ್ಯಾವಹಾರಿಕ ದೃಷ್ಟಿಯಿಂದ ದಿವ್ಯ ಕ್ಷೇತ್ರವಾಸಿಯಾದ ನಿನ್ನ ಸಾನ್ನಿಧ್ಯ ದಿಂದ ನಾನು ಬಹು ದೂರದಲ್ಲಿರುತ್ತಿದ್ದೇನೆ. ಆದರೂ ನಿನ್ನ ಪಾದಪದ್ಮ ಯುಗ್ಮವನ್ನು ವಂದಿಸುವ ಅಪೇಕ್ಷೆಯಿಂದ ನಿನ್ನನ್ನು ಸಮೀಪಿಸಿ, ನಿನ್ನ ಸೇವೆಯನ್ನು ಮಾಡುತ್ತೇನೆ. ಎಲೈ ಪರಮ ಕರುಣಾಳುವಾದ ವೇಂಕ ಟೇಶನೆ? ನಾನು ಶಕ್ತಿಯಿದ್ದಂತೆ ನಿನ್ನ ಸಾನ್ನಿಧ್ಯಕ್ಕೆ ಬಂದು ಯತ್ಕಿಂಚಿತ್ ಸೇವೆಯನ್ನು ಒಂದೇ ಒಂದು ಸಾರಿ ನಡೆಸಿದರೂ, ನಿತ್ಯ ಸೇವಾಫಲವನ್ನು ನನಗೆ ಅನುಗ್ರಹಿಸು.

**ಅಜ್ಞಾನಿನಾ ಮಯಾ ದೋಷಾ-**
**ನಶೇಷಾನ್ ವಿಹಿತಾನ್ ಹರೇ ।**
**ಕ್ಷಮಸ್ವ ತ್ವಂ ಕ್ಷಮಸ್ವ ತ್ವಂ**
**ಶೇಷಶೈಲಶಿಖಾಮಣೇ ॥ ೧೧ ॥**

ಭಕ್ತನೂ ಈ ಸ್ತೋತ್ರವನ್ನು ಮುಗಿಸುತ್ತಾ ಕೊನೆಯದಾಗಿ ಭಗವಂತನಲ್ಲಿ ಕ್ಷಮೆಯನ್ನು ಯಾಚಿಸುತ್ತಾನೆ-

ಶೇಷಶೈಲ ಶಿಖಾಮಣಿಯಾದ ಶ್ರೀ ವೇಂಕಟೇಶ! ನಾನು ಅಜ್ಞಾನಿ, ಸೇವೆ ಮಾಡುವ ನೆಪದಲ್ಲಿ ಯಾವ ಯಾವ ಅಪರಾಧಗಳನ್ನು ಮಾಡಿರುತ್ತೇನೋ ನನಗೆ ತಿಳಿಯದು. ಪರಮ ಕಾರಣಿಕನಾದ ನೀನು ನನ್ನ ಅಪರಾಧಗಳೆಲ್ಲವನ್ನೂ ಕ್ಷಮಿಸು.

ಇಂತು ಶ್ರೀ ವೇಂಕಟೇಶ ಸ್ತೋತ್ರವು ಮುಗಿಯಿತು.



॥ ಶ್ರೀಃ ॥

ಶ್ರೀ ಶ್ರಿಯೈ ನಮಃ

# ಶ್ರೀ ವೇಂಕಟೇಶ ಪ್ರಪತ್ತಿಃ

**ಈಶಾನಾಂ ಜಗತೋಽಸ್ಯ ವೇಂಕಟಪತೇಃ**
**ವಿಷ್ಣೋಃ ಪರಾಂ ಪ್ರೇಯಸೀಂ ।**
**ತದ್ವಕ್ಷ ಸ್ಥಲನಿತ್ಯವಾಸರಸಿಕಾಂ**
**ತತ್ ಕ್ಷಾಂತಿ ಸಂವರ್ಧಿನೀಮ್ ।**
**ಪದ್ಮಾಲಂಕೃತಪಾಣಿಪಲ್ಲವಯುಗಾಂ**
**ಪದ್ಮಾಸನಸ್ಥಾಂ ಶ್ರಿಯಂ**
**ವಾತ್ಸಲ್ಯಾದಿಗುಣೋಜ್ಜ್ವಲಾಂ ಭಗವತೀಂ**
**ವಂದೇ ಜಗನ್ಮಾತರಮ್ ॥ ೧ ॥**

ಈ ಜಗತ್ತಿಗೆ ಅಧೀಶ್ವರಿಯೂ, ಶ್ರೀ ವೇಂಕಟಾಚಲಪತಿಯ ಪರಮ ಪ್ರೇಯಸಿಯೂ, ಆತನ ವಕ್ಷ ಸ್ಥಲದಲ್ಲಿ ನಿತ್ಯವಾಸರಸಿಕಳೂ, ಆತನ ಕ್ಷಮಾಗುಣವನ್ನು ಸಂವರ್ಧನೆಗೊಳಿಸುವವಳೂ, ಪದ್ಮಗಳಿಂದ ಅಲಂಕೃತ ವಾದ ಚಿಗುರಿನಂತಹ ಎರಡು ಕೈಗಳುಳ್ಳವಳೂ, ಪದ್ಮಾಸನಾಸೀನಳೂ, ವಾತ್ಸಲ್ಯಾದಿ ಗುಣಗಳಿಂದ ಉಜ್ಜ್ವಲಳೂ, ಜಗನ್ಮಾತೆಯೂ ಆದ ಶ್ರೀ ದೇವಿಯನ್ನು ನಮಸ್ಕರಿಸುತ್ತೇನೆ.

ಈ ಪದ್ಯದಿಂದ ಶ್ರೀವೇಂಕಟೇಶ ಪ್ರಪತ್ತಿಯು ಆರಂಭವಾಗುವುದು. ''ಪ್ರಪತ್ತಿ'' ಎಂದರ ಶರಣಾಗತಿ, ಶ್ರೀವೇಂಕಟೇಶನ ಪಾದಾರವಿಂದಗಳ ಶರಣಾಗತಿಯೇ ಈ ಸ್ತೋತ್ರದ ರಹಸ್ಯ. ಮುಖ್ಯವಾಗಿ ಮುಮುಕ್ಷುವಾದ ವನಿಗೆ ಪ್ರಪತ್ತಿ ಅಥವಾ ಶರಣಾಗತಿ ಸುಲಭವೂ, ಶೀಘ್ರ ಫಲಪ್ರದವೂ ಆಗಿರುವ ಉಪಾಯ. ಸಂಪ್ರದಾಯನಿಷ್ಠರು ಯಾವ ಮಂತ್ರರತ್ನವನ್ನು ಗುರು ಪರಂಪರೆಯಿಂದ ಅರಿತು ಅನುಷ್ಠಾನಪರರಾಗಿ ತಮ್ಮ ಜನ್ಮವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳುವರೋ, ಯಾವ ರಹಸ್ಯವನ್ನು ಗೀತಾ ಚಾರ್ಯನಾದ ಶ್ರೀಕೃಷ್ಣನು ಶಿಷ್ಯನಾದ ಅರ್ಜುನನಿಗೆ ಉಪದೇಶಿಸುವ ರೀತಿಯಿಂದ ಜಗತ್ತಿಗೇ ಬೋಧಿಸಿರುವನೋ, ಯಾವುದೊಂದನ್ನು ಮನನ ಮಾಡಿದರೆ ಮತ್ತೊಂದನ್ನು ಮನನ ಮಾಡಬೇಕಾಗಿಯೇ ಇಲ್ಲವೋ, ಯಾವುದರಿಂದ ಸಾವಿರಾರು ಜನ್ಮಗಳ ಅಜ್ಞಾನವು ತೊಲಗಿ

ಜ್ಞಾನಿಯಾಗಿ-ವಾಸುದೇವನೇ ಸರ್ವಸ್ವನೆಂದು ಚೇತನನು ನಂಬುವನೋ, ಯಾವುದೊಂದನ್ನು ತಿಳಿಯುವುದಕ್ಕಾಗಿ ಮಹಾ ಮೇಧಾವಿಗಳೂ, ರಾಜ ಶ್ರೇಷ್ಠರೂ, ಶಾಸ್ತ್ರಪಾರಂಗತರೂ ತಿಳಿದವರ ಬಳಿಯಲ್ಲಿ ವರ್ಷ ವರ್ಷಗಳ ಕಾಲ ಅಲೆಯುತ್ತಿದ್ದರೋ, ಯಾವುದೊಂದನ್ನು ಪ್ರಕಟಿಸುವುದರ ದೆಸೆಯಿಂದ ಆಚಾರ್ಯರು ಉದಾರಚರಿತರೆಂದು ಖ್ಯಾತಿಗೊಂಡಿರುವರೋ, ಯಾವುದರ ಮಹಿಮೆಯು ಸ್ತ್ರೀ-ಪುರುಷರು, ಬಾಲ-ವೃದ್ಧರು, ತಿರ್ಯಕ್ - ಮಾನವರೇ ಮೊದಲಾದ ಯಾವ ಭೇದಗಳನ್ನೂ ಎಣಿಸದೇ ಸರ್ವವ್ಯಾಪಿಯಾಗಿರುವುದೋ ಮತ್ತು ಯಾವುದೊಂದರಲ್ಲಿಯೇ ಮುಮುಕ್ಷುಗಳು ನಿರ್ಭರರಾಗಿರುವರೋ ಅಂತಹ ಮಂತ್ರರತ್ನದ ಸಾರವೇ ಈ ಪ್ರಪತ್ತಿಯು. ಆದುದರಿಂದಲೇ 'ದ್ವಯದಲ್ಲಿ' ಹೇಗೆ 'ಶ್ರೀ' ಎಂಬ ಪದವು ಆರಂಭದಲ್ಲಿರುವುದೋ ಹಾಗೆಯೇ ಇದರಲ್ಲಿಯೂ ಶ್ರೀದೇವಿಯ ಸ್ತೋತ್ರವು ಮೊದಲು ಪ್ರಾರಂಭವಾಗಿರುತ್ತದೆ. ದ್ವಯದ ಮಂತ್ರರತ್ನದ ಮತ್ತು ವ್ಯಾಸದ ಸಂಪೂರ್ಣವಾದ ಅರ್ಥವನ್ನು ಈ ಸ್ತೋತ್ರವು ಪ್ರತಿಪಾದಿಸುತ್ತದೆ.

ಶ್ರೀದೇವಿಯು ಈ ಜಗತ್ತಿಗೆ ಅಧೀಶ್ವರಿ-ಎಂದು ಹೇಳಲು 'ಅಸ್ಯೇಶಾನಾ ಜಗತೋ ವಿಷ್ಣುಪತ್ನೀ'- ಅಂದರೆ ವಿಷ್ಣು ಪತ್ನಿಯಾದ ಶ್ರೀದೇವಿಯು ಈ ಜಗತ್ತಿಗೆ ಅಧೀಶ್ವರಿ ಎಂದು ತಿಳಿಸುವ ಶ್ರುತಿಯು ಪ್ರಮಾಣವಾಗಿರುವುದು. ಶ್ರುತ್ಯನುಸಾರಿಯಾದ ಪುರಾಣವೂ- 'ತ್ವಂ ಮಾತಾ ಸರ್ವಲೋಕಾನಾಂ ದೇವ ದೇವೋ ಹರಿಃ ಪಿತಾ!'- ಸಮಸ್ತ ಲೋಕಗಳಿಗೂ ಶ್ರೀದೇವಿಯು ಮಾತೆ ಎಂದೂ, ಶ್ರೀಹರಿಯು ಪಿತನೆಂದೂ ತಿಳಿಸಿ, ಜಗದೀಶ್ವರಿಯೆಂಬುದನ್ನು ಸಮರ್ಥಿಸುತ್ತದೆ. ಇದೇ ಅಭಿಪ್ರಾಯವನ್ನು ಲೌಕಿಕ ವೈದಿಕ ನಿದರ್ಶನಗಳಿಂದ ವ್ಯಕ್ತಪಡಿಸುತ್ತಾ, ಅಭಿಯುಕ್ತರಾದ ಶ್ರೀ ಶ್ರೀವತ್ಸಚಿಹ್ನ ಮಿಶ್ರರು (ಕೂರನಾಥ) ತಮ್ಮ ಶ್ರೀಸ್ತುತಿಯ ಮೊದಲನೆಯ ಪದ್ಯದಲ್ಲಿ ಈ ರೀತಿ ತಿಳಿಸಿದ್ದಾರೆ-

**ಸ್ವಸ್ತಿ ಶ್ರೀರ್ದಿಶತಾದಶೇಷಜಗತಾಂ ಸರ್ಗೋಪಸರ್ಗಸ್ಥಿತಿಃ**
**ಸ್ವರ್ಗಂ ದುರ್ಗತಿ ಮಾಪವರ್ಗಿಕ ಪದಂ ಸರ್ವಂ ಚ ಕುರ್ವನ್ ಹರಿಃ ॥**
**ಯಸ್ಯಾ ವೀಕ್ಷ್ಯ ಮುಖಂ ತದಿಂಗಿತಪರಾಧೀನೋ ವಿಧತ್ತೇಽಖಿಲಂ**
**ಕ್ರೀಡೇಯಂ ಖಲು ನಾನ್ಯಥಾಽಸ್ಯ ರಸದಾ ಸ್ಯಾದೈಕ ರಸ್ಯಾತ್ತಯಾ ॥**

ಎಂದರೆ, ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಡೆಸುವ ಪರಮಾತ್ಮನ ಲೀಲೆಯು ರಸವತ್ತಾದುದು; ಮಾತ್ರವೇ ಅಲ್ಲದೆ ಅದ್ಭುತವೂ ಆದುದು. ಇಂತಹ ರಸವತ್ತಾದ ಲೀಲೆಯು ರಸಜ್ಞರಾದವರಿಂದಲೇ ಸಾಧ್ಯ. ಆ ರಸಜ್ಞನು ಪರಮಾತ್ಮನಾದ ಶ್ರೀಮನ್ನಾರಾಯಣನಲ್ಲದೆ ಮತ್ತೆ ಯಾರೂ ಅಲ್ಲ. 'ರಸೋ ವೈ ಸಃ', 'ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ' (ಧ್ಯಾನಿಸಲು- ಆನಂದಿಸಲು ಯೋಗ್ಯವಾದ ಪರಮಾತ್ಮನನ್ನು ಅನುಸಂಧಾನ ಮಾಡಿ ಜೀವನು ಶಾಶ್ವತವಾದ ಆನಂದವುಳ್ಳವನಾಗುವನು) ಎಂಬ ಶ್ರುತಿಯು ಇದನ್ನು ವ್ಯಕ್ತಪಡಿಸುತ್ತದೆ. ಅಂತಹ ರಸಜ್ಞನಾದ ಶ್ರೀಮನ್ನಾರಾಯಣನೂ ಸಹ ಶ್ರೀದೇವಿಯ ಇಂಗಿತವನ್ನರಿತು ತನ್ನ ಲೀಲೆಗಳನ್ನು ಮುಂದುವರಿಸುವನು. ಅವರಿಬ್ಬರೂ ಹಾಗೆ ಏಕರಸ ರಾಗಿಲ್ಲದಿದ್ದರೆ ಅವನ ಲೀಲೆಯು ರಸವತ್ತಾಗಿ ಆಗುತ್ತಿರಲಿಲ್ಲ. ಆದುದ ರಿಂದಲೇ ಶ್ರೀದೇವಿಯು ಜಗತ್ತಿನ ಅಧೀಶ್ವರಿ; ಪುರುಷಕಾರ ಸ್ವರೂಪಳು. ಶತ್ರುವಿನಲ್ಲಿಯೂ ಆಕೆಯ ಕರುಣೆಯು ಅಪಾರವಾದುದು. ಈ ವಿಚಾರ ವನ್ನು ನಾವು ಜಗನ್ಮಾತೆಯಾದ ಸೀತಾದೇವಿಯ ಚರಿತ್ರೆಯಲ್ಲಿ ಕಾಕಾಸುರ ಘಟನೆಯಲ್ಲಿಯೂ ಆತ್ಮಾಪಹಾರಿಯಾದ ರಾವಣನ ವಿಷಯದಲ್ಲಿಯೂ ವಿಶದವಾಗಿ ಕಾಣಬಹುದು. 'ತತ್ ಕ್ಷಾಂತಿ ಸಂವರ್ಧಿನೀಮ್'- ಎಂದು ಈ ಪದ್ಯದಲ್ಲಿ ಬಂದಿರುವ ಪದವು ಇದೇ ಅಭಿಪ್ರಾಯವನ್ನು ಪ್ರಕಾಶ ಗೊಳಿಸುತ್ತದೆ.

ಹೀಗೆ ಜಗನ್ಮಾತೆಯೂ ಪುರುಷಕಾರಸ್ವರೂಪಳೂ ಆದ ಶ್ರೀದೇವಿ ಯನ್ನು ವಂದಿಸಿ, ಮುಂದಿನ ಪದ್ಯದಿಂದ ಶ್ರೀವೇಂಕಟೇಶನ ಚರಣಾರ ವಿಂದಗಳನ್ನು ಶರಣವನ್ನಾಗಿ ಆಶ್ರಯಿಸಿ ಪ್ರಪನ್ನನು ಈ ರೀತಿ ಪ್ರಾರ್ಥಿ ಸುತ್ತಾನೆ-

**ಶ್ರೀಮನ್ ಕೃಪಾಜಲನಿಧೇ ಕೃತಸರ್ವಲೋಕ**
**ಸರ್ವಜ್ಞಶಕ್ತ ನತವತ್ಸಲ ಸರ್ವಶೇಷಿನ್ ।**
**ಸ್ವಾಮಿನ್ ಸುಶೀಲಸುಲಭಾಶ್ರಿತಪಾರಿಜಾತ**
**ಶ್ರೀ ವೇಂಕಟೇಶ ಚರಣೌ ಶರಣಂ ಪ್ರಪದ್ಯೇ ॥ ೨ ॥**

ಶ್ರೀದೇವಿಯ ನಿತ್ಯಯೋಗವುಳ್ಳವನೂ, ಕೃಪಾ ಸಮುದ್ರನೂ, ಸರ್ವ ಲೋಕಗಳ ನಿಯಾಮಕನೂ, ಸರ್ವಜ್ಞನೂ, ಸರ್ವಶಕ್ತನೂ, ಆಶ್ರಿತ

